ಹಾಜರಾಗಿರುತ್ತೀರಿ. ನೀವು ಒಬ್ಬ ಜವಾಬ್ದಾರಿಯುತ ಪೊಲೀಸ್ ಸಿಬ್ಬಂದಿಯಾಗಿದ್ದು ಅತೀ ಮುಖ್ಯವಾದ ಠಾಣಾ ಪಹರೆ ಕರ್ತವ್ಯದಲ್ಲಿ ವಾಸ್ತವ್ಯ ಇರದೆ 15 ನಿಮಿಷಗಳ ಕಾಲ ಠಾಣಾ ಪಹರೆ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ ಹಾಗೂ ಅಶಿಸ್ತು ಪ್ರದರ್ಶಿಸಿರುತ್ತೀರಿ"

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 26.11.2012ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು 06 ತಿಂಗಳ ಕಾಲ ನಂತರದ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರದಂತೆ ಮುಂದೂಡುವ ದಂಡನೆಯನ್ನು ವಿಧಿಸಿ, ಇವರು ಮಾನತ್ತಿನಲ್ಲಿದ್ದ ಅವಧಿ ದಿನಾಂಕ: 18.12.2011 ರಿಂದ 25.02.2012 ರವರೆಗೆ 70 ದಿವಸಗಳನ್ನು ಅಮಾನತ್ತೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 11.02.2013ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ದಂಡನೆಯನ್ನು ಭಾಗಶಃ ಮಾರ್ಪಡಿಸಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು 03 ತಿಂಗಳ ಕಾಲ ನಂತರದ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರದಂತೆ ಮುಂದೂಡುವ ದಂಡನೆಯನ್ನು ವಿಧಿಸಿ ಇವರ ಅಮಾನತ್ತಿನ ಅವಧಿಯನ್ನು ಅವರ ಲೆಕ್ಕದಲ್ಲಿರುವ ರಜೆ ಎಂದು ಪರಿಗಣಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಈಗಾಗಲೇ ಶಿಸ್ತು ಪ್ರಾಧಿಕಾರವು ವಿಧಿಸಿದ ದಂಡನೆಯನ್ನು ಮೇಲ್ಮನವಿ ಪ್ರಾಧಿಕಾರವು ಮಾರ್ಪಡಿಸಿರುವ ಕಾರಣ ಸದರಿ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 52 ಪೊಸಿಅ 2013 ಬೆಂಗಳೂರು, ದಿನಾಂಕ: 10.10.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ವಿ. ರವಿ, ಸಿಪಿಸಿ–228, ಕೆಸ್ತೂರು ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.1096**
**SC.30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಸ್.ಬಿ. ಗಸ್ತಿ, ಸಿಹೆಚ್‌ಸಿ–1815, ಸದಲಗಾ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ ಇವರ ಆದೇಶ ಸಂಖ್ಯೆ ಸಿಬ್ಬಂದಿ–2ಎ/ಪಿಆರ್/99/2012 (ಆ.ಪು.ಸಂ.604/2012) ದಿನಾಂಕ 30.07.2012
2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ ಅಪೀಲು/108/ಉವ/2012, ದಿನಾಂಕ 06.12.2012
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 12.06.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)17/2013–14 ದಿನಾಂಕ 04.08.2013

**ಪ್ರಸ್ತಾವನೆ:**

ಶ್ರೀ ಎಸ್.ಬಿ. ಗಸ್ತಿ, ಸಿಹೆಚ್‌ಸಿ–1815, ಸದಲಗಾ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇಲ್ಲಿ ಎಸ್.ಹೆಚ್.ಒ. ಚಾರ್ಜ್‌ನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಸಹೋದ್ಯೋಗಿಗೆ ಅವಾಚ್ಯ ಶಬ್ದಗಳಿಂದ ಬೈದು ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಹಾಗೂ ಉದಾಸೀನತೆಯನ್ನು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಅಪಾದಿತ ಪೊಲೀಸ್ ಅಧಿಕಾರಿಯಾದ ನೀವು ಠಾಣೆಯ ಎಸ್.ಹೆಚ್.ಒ. ಚಾರ್ಜ್‌ದಲ್ಲಿದ್ದಾಗ ನೇಜ್ ಗ್ರಾಮದ ಶ್ರೀಮತಿ ಪಾರ್ವತಿ ದಯಾನಂದ ಪೋಳ ಇವರು ಠಾಣೆಗೆ ಅರ್ಜಿ ಕೊಡಲು ಬಂದಾಗ ಇವರೊಂದಿಗೆ ಅಸಭ್ಯ ರೀತಿಯಲ್ಲಿ ವರ್ತಿಸಿರುವುದನ್ನು ಕಂಡು ದೀಪಕ ರಾಮಚಂದ್ರ ಖೋತ ಇವರು ನೀವು ಹೀಗೆಲ್ಲ ಮಾತನಾಡುವುದು ಸರಿ ಅಲ್ಲ ಎಂದು ತಿಳಿ ಹೇಳಲು ಬಂದಾಗ ನೀವು ಅವರಿಗೆ ಅವಾಚ್ಯ ಶಬ್ದಗಳಿಂದ ಬೈದು, ಅವರ ತಲೆಯ ಮೇಲೆ ಹೊಡೆದಿರುವ ಪರಿಣಾಮವಾಗಿ ಸದಲಗಾ ಪೊಲೀಸ್ ಠಾಣೆ ಎನ್‌ಸಿ ಸಂಖ್ಯೆ:01/2012 ಕಲಂ.355 ಐಪಿಸಿ ನೇದ್ದು ದಾಖಲಾಗಲು ಕಾರಣೀಭೂತರಾಗಿದ್ದಲ್ಲದೇ ಸದರಿ ದಿನದಂದು ಕರ್ತವ್ಯದ ಮೇಲಿದ್ದಾಗ ಸರಾಯಿ ಕುಡಿದು ನಿಮ್ಮ ಕರ್ತವ್ಯದಲ್ಲಿ ಘೋರ ನಿಷ್ಕಾಳಜಿತನ, ಬೇಜವಾಬ್ದಾರಿತನ ಹಾಗೂ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ"

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 30.07.2012ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಅವರ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು (06) ಆರು ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿ ದಿನಾಂಕ: 02.06.2012ರಿಂದ 21.06.2012ರವರೆಗೆ ಅಮಾನತ್ತಿನಲ್ಲಿದ್ದ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 06.12.2012ರ ಆದೇಶದಲ್ಲಿ ಅರ್ಜಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಹಾಗೂ ಉದಾಸೀನತೆಯನ್ನು ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 73 ಪೊಸಿಅ 2013 ಬೆಂಗಳೂರು, ದಿನಾಂಕ: 10.10.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಬಿ. ಗಸ್ತಿ, ಸಿಹೆಚ್‌ಸಿ–1815, ಸದಲಗಾ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.1098**
**SC.30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ವಿ. ನಟರಾಜು, ಹೆಚ್‌ಸಿ–85, ಮದ್ದೂರು ಪೊಲೀಸ್ ಠಾಣೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರ ಆದೇಶ ಸಂಖ್ಯೆ ಸಿಬ್ಬಂದಿ(2)/ಡಿಇ/03/2011–12 (ಒ.ಬಿ. ಸಂಖ್ಯೆ 98/2012–13) ದಿನಾಂಕ 28.06.2012
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರ ಆದೇಶ ಸಂಖ್ಯೆ ಅಪೀಲು/26/2012–13 (ಒ.ಬಿ. ಸಂಖ್ಯೆ 33/2012–13) ದಿನಾಂಕ 06.10.2012
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 28.05.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)15/2013–14 ದಿನಾಂಕ: 23.07.2013

**ಪ್ರಸ್ತಾವನೆ:**

ಶ್ರೀ ವಿ. ನಟರಾಜು, ಹೆಚ್‌ಸಿ–85, ಮದ್ದೂರು ಪೊಲೀಸ್ ಠಾಣೆ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಹಿಂದೆ ಮಳವಳ್ಳಿ ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

> **"**ಶ್ರೀ ವಿ. ನಟರಾಜು, ಸಿಪಿಸಿ–551, ಈ ಹಿಂದೆ ಮಳವಳ್ಳಿ ಗ್ರಾಮಾಂತರ ಪೊಲೀಸ್ ಠಾಣೆ ಹಾಲಿ ಮಂಡ್ಯ ಪೂರ್ವ ಪೊಲೀಸ್ ಠಾಣೆ ಆದ ನೀವು ಆಗಸ್ಟ್ 2009 ರಿಂದ ಮಳವಳ್ಳಿ ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಗುಪ್ತ ಮಾಹಿತಿ ಸಂಗ್ರಹಣೆ ಕರ್ತವ್ಯ ನಿರ್ವಹಿಸುತ್ತಿದ್ದು, ಮಳವಳ್ಳಿ ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ನಡೆಯುವ ಅಕ್ರಮ ಕಾನೂನು ಬಾಹಿರ ಚಟುವಟಿಕೆಗಳ ಬಗ್ಗೆ ಮುಂಜಾಗರೂಕತೆಯಾಗಿ ಮಾಹಿತಿ ಸಂಗ್ರಹಿಸಿ ಮೇಲಾಧಿಕಾರಿಗಳಿಗೆ ತಿಳಿಸುವಂತೆ ಸಲಹೆ ಸೂಚನೆಗಳನ್ನು ನೀಡಿದ್ದರೂ ಸಹ ನೀವು ಗುಪ್ತ ಮಾಹಿತಿಯನ್ನು ಸಂಗ್ರಹಿಸಲು ವಿಫಲರಾಗಿರುತ್ತೀರಿ. ಮಳವಳ್ಳಿ ಗ್ರಾಮಾಂತರ ಪೊಲೀಸ್ ಠಾಣೆಯ ಬೈರವ ರಿಕ್ರಿಯೇಷನ್ ಕ್ಲಬ್‌ನಲ್ಲಿ ನೆಲಮಾಕನಹಳ್ಳಿ ಮತ್ತು ಕನಕಪುರ ರಸ್ತೆಯ ಕೆಂಪಯ್ಯ ಕಟ್ಟೆಯ ಬಳಿ ಇಸ್ಪೀಟು ಜೂಜಾಟ ನಡೆಯುತ್ತಿದ್ದ ಬಗ್ಗೆ ಮಾಹಿತಿ ಸಂಗ್ರಹಿಸಿ ಮೇಲಾಧಿಕಾರಿಗಳಿಗೆ ತಿಳಿಸಲು ವಿಫಲರಾಗಿರುತ್ತೀರಿ. ನೀವು ಓರ್ವ ಜವಾಬ್ದಾರಿಯುತ ಪೊಲೀಸ್ ಸಿಬ್ಬಂದಿಯಾಗಿದ್ದು, ಮೇಲಾಧಿಕಾರಿಗಳು ವಹಿಸಿದ ಕೆಲಸವನ್ನು ನಿರ್ವಹಿಸದೆ, ನೀವು ಎಸ್.ಬಿ. ಕರ್ತವ್ಯವನ್ನು ನಿರ್ವಹಿಸುತ್ತಿದ್ದರು ಠಾಣಾ ವ್ಯಾಪ್ತಿಯಲ್ಲಿ ನಡೆಯುತ್ತಿರುವ ಅಕ್ರಮ ಕಾನೂನು ಬಾಹಿರ ಚಟುವಟಿಕೆಗಳ ಬಗ್ಗೆ ಗುಪ್ತ ಮಾಹಿತಿ ಸಂಗ್ರಹಿಸಿ ಮೇಲಾಧಿಕಾರಿಗಳಿಗೆ ತಿಳಿಸಲು ವಿಫಲರಾಗಿ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಬೇಜವಬ್ದಾರಿತನ ತೋರಿರುವುದು ಕಂಡು ಬಂದಿರುತ್ತದೆ.**"**

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 28.06.2012ರ

ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷಗಳ ಕಾಲ ನಂತರದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ತಡೆಹಿಡಿಯುವ ದಂಡನೆಯನ್ನು ವಿಧಿಸಿ ದಿನಾಂಕ: 07.04.2011ರಿಂದ ದಿನಾಂಕ: 02.06.2011ರವರೆಗೆ ಒಟ್ಟು 57 ದಿವಸಗಳು ಅಮಾನತ್ತಿನಲ್ಲಿದ್ದ ಅವಧಿಯನ್ನು ಅಮಾನತ್ತೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 06.10.2012ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ದಂಡನೆಯನ್ನು ಭಾಗಶಃ ಮಾರ್ಪಡಿಸಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು 3 ತಿಂಗಳ ಕಾಲ ನಂತರದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮುಂದೂಡುವ ದಂಡನೆಯನ್ನು ವಿಧಿಸಿ, ಇವರ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಈಗಾಗಲೇ ಶಿಸ್ತು ಪ್ರಾಧಿಕಾರವು ವಿಧಿಸಿದ ದಂಡನೆಯನ್ನು ಮೇಲ್ಮನವಿ ಪ್ರಾಧಿಕಾರವು ಮಾರ್ಪಡಿಸಿರುವ ಕಾರಣ ಸದರಿ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 64 ಪೊಸಿಅ 2013 ಬೆಂಗಳೂರು, ದಿನಾಂಕ: 10.10.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವಿ. ನಟರಾಜು, ಹೆಚ್‌ಸಿ–85, ಮದ್ದೂರು ಪೊಲೀಸ್ ಠಾಣೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.1099**

**SC.30**

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎಸ್.ಆರ್. ಮಂಟೂರು, ಎಪಿಸಿ–737, ಸಿಎಆರ್, ಹುಬ್ಬಳ್ಳಿ–ಧಾರವಾಡ ನಗರ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಹುಬ್ಬಳ್ಳಿ ಧಾರವಾಡ ನಗರ ಇವರ ಆದೇಶ ಸಂಖ್ಯೆ ಸಿಪಿ/ಸಿಬ್ಬಂದಿ–3/ನಿಯಮ–7/59/2012 (ಆದೇಶ ಪುಸ್ತಕ ಸಂಖ್ಯೆ: 920/2012) ದಿನಾಂಕ 12.09.2012

2) ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಹಿಂಬರಹ ಸಂಖ್ಯೆ ಅಪೀಲು(4)/64/2012–13 ದಿನಾಂಕ 27.02.2013

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 14.02.2013

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)84/2012–13 ದಿನಾಂಕ 26.08.2013

**ಪ್ರಸ್ತಾವನೆ:**

ಶ್ರೀ ಎಸ್.ಆರ್. ಮಂಟೂರು, ಎಪಿಸಿ–737, ಸಿಎಆರ್, ಹುಬ್ಬಳ್ಳಿ–ಧಾರವಾಡ ನಗರ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇಲ್ಲಿ ವಾಹನ ಚಾಲಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಮದ್ಯ ಸೇವನೆ ಮಾಡಿ ಕರ್ತವ್ಯದಲ್ಲಿ ಅತೀವ ದುರ್ನಡತೆ ಹಾಗೂ ಅಶಿಸ್ತನ್ನು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ದ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ನೀವು ದಿನಾಂಕ: 10.12.2011 ರಂದು 16:15 ಗಂಟೆಗೆ ಇಂಟರ್ ಸೆಪ್ಟರ್ ವಾಹನದಲ್ಲಿ ಚಾಲಕನೆಂದು ಕರ್ತವ್ಯ ನಿರ್ವಹಿಸುತ್ತಿರುವಾಗ ಮದ್ಯ ಸೇವನೆ ಮಾಡಿ ನಿಮ್ಮ ಕರ್ತವ್ಯದಲ್ಲಿ ದುರ್ನಡತೆ ಮತ್ತು ಅಶಿಸ್ತನ್ನು ಎಸಗಿ ಕಾನೂನು ಉಲ್ಲಂಘನೆ ಮಾಡಿ ಸಾರ್ವಜನಿಕರಲ್ಲಿ ಇಲಾಖೆಯ ಬಗ್ಗೆ ತಾತ್ಸಾರ ಮನೋಭಾವನೆ ಮೂಡುವಂತೆ ವರ್ತಿಸಿರುತ್ತೀರಿ.

ಈ ಬಗ್ಗೆ ಇದೊಂದು ಬಾರಿ ಕ್ಷಮಿಸುವಂತೆ ಎಸಿಪಿರವರಿಗೆ ಜೆ.ಡಿ.ಎಸ್. ಅಧ್ಯಕ್ಷರಾದ ಎನ್.ಎಚ್.ಕೋನರೆಡ್ಡಿರವರಿಂದ ದೂರವಾಣಿ ಮುಖಾಂತರ ಮಾತನಾಡಿಸಿ, ರಾಜಕೀಯ ವ್ಯಕ್ತಿಗಳಿಂದ ಶಿಫಾರಸ್ಸು ಮಾಡಿಸಿ ನಿಮ್ಮ ಕರ್ತವ್ಯದಲ್ಲಿ ದುರ್ನಡತೆ ಮತ್ತು ಅಶಿಸ್ತನ್ನು ಎಸಗಿರುತ್ತೀರಿ.

ನಿಮ್ಮ ಕೋರಿಕೆಯ ಮೇರೆಗೆ ಈ ಬಗ್ಗೆ ಎಸಿಪಿರವರು ಮಾನವೀಯತೆ ದೃಷ್ಟಿಯಿಂದ ಕ್ಷಮಿಸಿ ಕರ್ತವ್ಯ ನಿರ್ವಹಿಸಲು ಅವಕಾಶ ಕಲ್ಪಿಸಿದಾಗ್ಯೂ ಸಹ ಇದನ್ನು ಮರೆತು ಎಸಿಪಿರವರ ಮಾನವೀಯತೆಯನ್ನು ದುರುಪಯೋಗ ಪಡಿಸಿಕೊಂಡು ಇಲ್ಲಸಲ್ಲದ ಆರೋಪಗಳೊಂದಿಗೆ ಮೇಲಾಧಿಕಾರಿಗಳಿಗೆ ಅರ್ಜಿ ಮಾಡಿ ನಿಮ್ಮ ಕರ್ತವ್ಯದಲ್ಲಿ ದುರ್ನಡತೆ ಮತ್ತು ಅಶಿಸ್ತನ್ನು ಪ್ರದರ್ಶಿಸಿರುತ್ತೀರಿ."

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಹುಬ್ಬಳ್ಳಿ ಧಾರವಾಡ ನಗರ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 12.09.2012ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರದಂತೆ **"ಮೂರು (03) ತಿಂಗಳ ಕಾಲ"** ಮುಂದೂಡುವ ದಂಡನೆಯನ್ನು ವಿಧಿಸಿ, ಇವರ ಅಮಾನತ್ತಿನ ಅವಧಿ ದಿನಾಂಕ: 23.04.2012ರಿಂದ 11.08.2012ರವರೆಗೆ ಒಟ್ಟು 111 ದಿನಗಳನ್ನು ಅಮಾನತ್ತೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 27.02.2013ರ ಹಿಂಬರಹದಲ್ಲಿ ಕಾಲವಿಳಂಬವಾಗಿ ಮೇಲ್ಮನವಿ ಸಲ್ಲಿಸಿದ ಕಾರಣ ಮೇಲ್ಮನವಿಯನ್ನು ಪರಿಗಣಿಸಲು ನಿಯಮಗಳಲ್ಲಿ ಆಸ್ಪದವಿಲ್ಲವೆಂದು ತಿಳಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಅತೀವ ದುರ್ನಡತೆ ಹಾಗೂ ಅಶಿಸ್ತು ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 109 ಪೊಸಿಅ 2013 ಬೆಂಗಳೂರು, ದಿನಾಂಕ: 10.10.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಆರ್. ಮಂಟೂರು, ಎಪಿಸಿ–737, ಸಿಎಆರ್, ಹುಬ್ಬಳ್ಳಿ–ಧಾರವಾಡ ನಗರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

PR.1100
SC.30

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಕೆ. ಕಾಂತರಾಜ, ಸಿಪಿಸಿ–693, ಬಿಳಿಚೋಡು ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ ಇವರ ಆದೇಶ ಸಂಖ್ಯೆ ಸಿಬ್ಬಂದಿ(5)/ಪಿಆರ್/115/2012 (ಒ.ಬಿ. ಸಂಖ್ಯೆ 1525/2012) ದಿನಾಂಕ 29.08.2012
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರ ಹಿಂಬರಹ ಸಂಖ್ಯೆ 72/ಸಿಬ್ಬಂದಿ–2/2012–13 ದಿನಾಂಕ 10.01.2013
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 16.02.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)85/2012–13 ದಿನಾಂಕ 23.07.2013

**ಪ್ರಸ್ತಾವನೆ:**

ಶ್ರೀ ಕೆ. ಕಾಂತರಾಜ, ಸಿಪಿಸಿ–693, ಬಿಳಿಚೋಡು ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಮತ್ತು ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಕೆ.ಕಾಂತರಾಜು ಆದ ನೀವು ಹಲವಾಗಲು ಪೊಲೀಸ್ ಠಾಣೆಯಲ್ಲಿ ಸಿಪಿಸಿ–693 ಆಗಿ ಕರ್ತವ್ಯ ನಿರ್ವಹಿಸುತ್ತಿದ್ದ ನಿಮ್ಮ ಮೇಲಾಧಿಕಾರಿಗಳ ಆದೇಶವನ್ನು ಚಾಚೂ ತಪ್ಪದೇ ಪಾಲಿಸುವುದು ಮತ್ತು ಇಲಾಖೆಯ ನಿಯಮಾವಳಿಗಳಿಗೆ ಬದ್ಧರಾಗಿದ್ದುಕೊಂಡು ಅವುಗಳ ಚೌಕಟ್ಟಿನಲ್ಲಿಯೇ ಕರ್ತವ್ಯ ನಿರ್ವಹಿಸುವುದು ಮತ್ತು ಹಾಗೂ ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುವ ನೀವು ಸಾರ್ವಜನಿಕರ ರಕ್ಷಣೆ ಮಾಡಬೇಕಾದದ್ದು ಮತ್ತು ಸರ್ಕಾರದ ಸ್ವತ್ತನ್ನು ಕಾಪಾಡುವುದು ನಿಮ್ಮ ಆದ್ಯ ಕರ್ತವ್ಯವಾಗಿರುತ್ತದೆ. ನೀವು ದಿನಾಂಕ: 16.04.2012 ರಂದು ರಾತ್ರಿ 08–00 ಗಂಟೆಯಿಂದ ದಿನಾಂಕ: 17.04.2012 ರಂದು ಬೆಳಿಗ್ಗೆ 08–00 ಗಂಟೆಯವರೆಗೆ ಠಾಣಾ ಪಹರೆ ಕರ್ತವ್ಯವನ್ನು ನಿರ್ವಹಿಸಿ ವಿಶ್ರಾಂತಿಗೆ ಹೋದ ಸಮಯದಲ್ಲಿ ಕೆಎ–17 3959 ಲಾರಿಯಲ್ಲಿ ಅಕ್ರಮವಾಗಿ ಯಾವುದೇ ಪರವಾನಿಗೆ ಇಲ್ಲದೆ ಮರಳನ್ನು ತೆಗೆದುಕೊಂಡು ಹೋಗುತ್ತಿರುವಾಗ ಕುರುಬರಹಳ್ಳಿ ಕ್ರಾಸ್ ಹತ್ತಿರ ಕರ್ನಾಟಕ ನವ ಸೇನೆ ಅಧ್ಯಕ್ಷರಾದ ಶ್ರೀ ಮಲ್ಲಿಕಾರ್ಜುನ ಸವಣೂರು, ಇವರು ಇತರರೊಂದಿಗೆ ಸೇರಿ ಮೇಲ್ಕಂಡ ವಾಹನವನ್ನು ತಪಾಸಣೆ ಮಾಡಿ, ಸದರಿ ಲಾರಿಯ ಚಾಲಕ ಶಿವರಾಜು ತಾಯಿ ಕ್ಯಾರಮ್ಮ 28 ವರ್ಷ ಹರಿಜನ ಜನಾಂಗ, ವಾಸ ಹಲುವಾಗಲು ಗ್ರಾಮ ಈತನನ್ನು ವಿಚಾರಿಸಿ, ಅವರು ಸಹ ಮುಂದೆ ಬೈಕಿನಲ್ಲಿ ಹೋಗುತ್ತಿದ್ದಾರೆ ಅಂತಾ ತಿಳಿಸಿರುತ್ತಾರೆ. ಈ ಬಗ್ಗೆ ನಿಮ್ಮನ್ನು ವಿಚಾರಿಸಿದಾಗ ನನ್ನ ನಿವೇಶದಲ್ಲಿ ಮನೆ ಕಟ್ಟಡ ಕಾಮಗಾರಿಗೆ ಬೇಕಾಗಿದೆ ಎಂದು ತಿಳಿಸಿರುತ್ತೀರಿ. ಈ ಬಗ್ಗೆ ನಿಮ್ಮ ಮೇಲಾಧಿಕಾರಿಗಳು ನಿಮಗೆ ಸಂಬಂಧಪಟ್ಟ ನಿವೇಶನದ ಬಳಿ

ಪರಿಶೀಲಿಸಿದಾಗ 05 ರಿಂದ 06 ಲೋಡ್ ಮರಳಿನ ರಾಶಿ ಇರುವುದು ಕಂಡುಬಂದಿರುತ್ತದೆ ಮತ್ತು ಯಾವುದೇ ಕಟ್ಟಡ ಕಾಮಗಾರಿ ನಡೆದಿರುವುದಿಲ್ಲಾ ನೀವು ಗೌರವಾನ್ವಿತ ಪೊಲೀಸ್ ಇಲಾಖೆಯಲ್ಲಿದ್ದುಕೊಂಡು ಈ ರೀತಿ ಅಕ್ರಮವಾಗಿ ಸರ್ಕಾರಿ ಸ್ವತ್ತನ್ನು ಯಾವುದೇ ಪರವಾನಿಗೆ ಇಲ್ಲದೇ ಸಾಗಿಸಿ ದಾಸ್ತಾನು ಮಾಡಿ ಸಮಾಜದಲ್ಲಿ ಪೊಲೀಸ್ ಇಲಾಖೆಯ ಗೌರವಕ್ಕೆ ಕುಂದುಂಟು ಮಾಡಿರುವುದಲ್ಲದೇ ನೀವು ಕೆಳಮಟ್ಟದ ನಡತೆಯನ್ನು ಪ್ರದರ್ಶಿಸುವುದರೊಂದಿಗೆ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಹಾಗೂ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ"

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 29.08.2012ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ 2 (ಎರಡು) ವರ್ಷಕಾಲ ಮುಂದೂಡಿ, ಇವರ ಅಮಾನತ್ತಿನ ಅವಧಿ ದಿನಾಂಕ: 25.04.2012 ರಿಂದ 15.05.2012ರವರೆಗಿನ ಒಟ್ಟು 22 ದಿನಗಳ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿ ಆದೇಶಿಸಿರುತ್ತದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 10.01.2013ರ ಆದೇಶದಲ್ಲಿ ವಿಳಂಬದ ಕಾರಣದನ್ವಯ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ ಹಾಗೂ ದುರ್ನಡತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 33 ಪೊಸಿಅ 2013 ಬೆಂಗಳೂರು, ದಿನಾಂಕ: 10.10.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕೆ. ಕಾಂತರಾಜ, ಸಿಪಿಸಿ–693, ಬಿಳಿಚೋಡು ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.1101
SC.30

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಸೈಯದ್ ಹಮೀದುದ್ದೀನ್, ಮಾಜಿ ಪಿಸಿ–2231, ವಡಗೆರ ಪೊಲೀಸ್ ಠಾಣೆ, ಗುಲಬರ್ಗಾ ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಗುಲಬರ್ಗಾ ಇವರ ಆದೇಶ ಸಂಖ್ಯೆ 9:DE:2003 (DOB No. 1535/2005) ದಿನಾಂಕ 09.08.2005
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲಬರ್ಗಾ ಇವರ ಆದೇಶ ಸಂಖ್ಯೆ ಅಪೀಲು/85/ಈವ/2005 (ಆ.ಪು.ಸಂ.486/ಈವ/2005) ದಿನಾಂಕ 26.11.2005
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 09.11.2007
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)108/2007–08 ದಿನಾಂಕ: 11.03.2008, 30.04.2008, 22.02.2013 ಮತ್ತು 20.06.2013

**ಪ್ರಸ್ತಾವನೆ:**

ಶ್ರೀ ಸೈಯದ್ ಹಮೀದುದ್ದೀನ್, ಮಾಜಿ ಪಿಸಿ–2231, ವಡಗೆರ ಪೊಲೀಸ್ ಠಾಣೆ, ಗುಲಬರ್ಗಾ ಜಿಲ್ಲೆ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇಲ್ಲಿ ಕರ್ತವ್ಯದಲ್ಲಿದ್ದಾಗ ಅವಾಚ್ಯ ಶಬ್ದಗಳಿಂದ ಬೈದು ಅತೀವ ನಿರ್ಲಕ್ಷತೆ ಹಾಗೂ ಉದಾಸೀನತೆಯನ್ನು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಸಿಪಿಸಿ 2231 ಹಮೀದುದ್ದೀನ್ ವಡಗೇರಾ ಪೊಲೀಸ್ ಠಾಣೆ ನೀವು ದಿನಾಂಕ: 08.02.2003 ರಂದು ರಾತ್ರಿ 11.30 ಗಂಟೆ ಸುಮಾರಿಗೆ ಪಿ.ಎಸ್ಐ. ರಾಮರಾವ್ ವಡೇಗೇರಾ ಠಾಣೆ ಇವರು ರಾತ್ರಿ ಗಸ್ತು ಚೆಕಿಂಗ್ ಕುರಿತು ಬರುತ್ತಿದ್ದಾಗ ನೀವು ಠಾಣೆಯ ಮುಂಭಾಗದಲ್ಲಿ ನಿಂತು ಅವ್ಯಾಚ ಶಬ್ದಗಳಿಂದ ಬೈಯುವುದು, ಕೂಗಾಡುವುದು ಮಾಡುತ್ತಿದ್ದಾಗ ಪಿಎಸ್ಐ ರವರು ನೋಡಿ ನಿಮಗೆ ಹೀಗೇಕೆ ಅಸಭ್ಯವಾಗಿ ವರ್ತಿಸುತ್ತಿ ರಾತ್ರಿ ಕರ್ತವ್ಯಕ್ಕೆ ಹೋಗು, ಯಾಕೆ ಹೋಗಿರುವುದಿಲ್ಲ ಅಂತಾ ನಿಮಗೆ ಹೇಳಿದಾಗ ನೀವು ಠಾಣೆಯ ಅಧಿಕಾರಿ ಶ್ರೀ ರಾಮರಾವ್ ಪಿಎಸ್ಐ ಇವರಿಗೆ "ತೂ ಕ್ಯಾ ಜಾಂಟಾ ಉಖಾಡತಾ ಸಾಲೇ" ಅಂತಾ ಅವ್ಯಾಚ ಶಬ್ದಗಳಿಂದ ಬೈದು

ನಿಮಗೆ ನನಗೆ ಬೇಕಂತ ಸತಾಯಿಸುತ್ತಿದ್ದ ರಾತ್ರಿ ಗಸ್ತು ಯಾಕೆ ಹಾಕಿದ್ದಿ ಬೊಸಡಿ ಮಗನೇ ಪಿಎಸ್‌ಐ ಅಂತಾ ಬೈದು ನೀವು ನಿಮ್ಮ ಬಲಗೈ ಮುಷ್ಠಿ ಮಾಡಿ ಪಿಎಸ್‌ಐ ರವರ ಬಲಗಣ್ಣಿನ ಮೇಲೆ, ಮೈಗೆ ಹಾಗೂ ಬೆನ್ನಿಗೆ ಹೊಡೆದು ರಕ್ತ ಗಾಯ ಮತ್ತು ಗುಪ್ತಗಾಯಗೊಳಿಸಿದ್ದು ನಿಮ್ಮ ಪರ ವಹಿಸಿ ಹೆಚ್‌ಸಿ 652 ನಾಗಪ್ಪಾ ಇವರೂ ಭಾಗವಹಿಸಿದ್ದು ಈ ಕುರಿತು ವಡೇಗೇರಾ ಪೊಲೀಸ್ ಠಾಣೆಯಲ್ಲಿ ನಿಮ್ಮಗಳ ವಿರುದ್ಧ ಠಾಣಾ ಗುನ್ನೆ ನಂ: 8/2003 ಕಲಂ 353 324 504 506 ಸಂಗಡ 34 ಐಪಿಸಿ ಅಡಿಯಲ್ಲಿ ಕೇಸು ದಾಖಲಾಗಿದ್ದು ಇರುತ್ತದೆ. ನೀವು ಶಿಸ್ತಿನ ಇಲಾಖೆಯಲ್ಲಿದ್ದು ಬೇಜವಾಬ್ದಾರಿತನ ಮತ್ತು ಅಶಿಸ್ತನ್ನು ಪ್ರದರ್ಶಿಸಿದ್ದು ಅಲ್ಲದೇ ಮೇಲಾಧಿಕಾರಿಗಳಿಗೆ ಹೊಡೆಬಡೆ ಮಾಡಿ ರಕ್ತ ಗಾಯ ಮತ್ತು ಗುಪ್ತಗಾಯಪಡಿಸಿದ್ದು ಇರುತ್ತದೆ ಅಂತಾ ನಿಮ್ಮ ಮೇಲೆ ದೋಷಾರೋಪಣೆ ಇದ್ದು ಪಿಎಸ್‌ಐ ರವರು ಕರ್ತವ್ಯದಲ್ಲಿದ್ದಾಗ ಅವರಿಗೆ ಹೊಡೆಬಡೆ ಮಾಡಿ ಜೀವದ ಬೆದರಿಕೆ ಕೂಡಾ ಹಾಕಿದ್ದು ಅದೆ."

ಮೇಲಿನ ಆರೋಪದ ಮೇಲೆ ಆರೋಪಿಗೆ ಶೋಕಾಸ್ ನೋಟೀಸ್ ಜಾರಿಗೊಳಿಸಿ ತಮ್ಮ ಅಭಿಪ್ರಾಯಗಳನ್ನು ಸಮರ್ಥಿಸಿಕೊಳ್ಳಲು ಅವಕಾಶ ನೀಡಿದ್ದರೂ ಸಹ ಇದಕ್ಕೆ ಸ್ಪಂದಿಸದ ಕಾರಣ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಗುಲಬರ್ಗಾ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 09.08.2005ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಿ ಇವರು ಅಮಾನತ್ತಿನಲ್ಲಿದ್ದ ದಿನಾಂಕ 13.02.2003ರಿಂದ 12.05.2003ರವರೆಗಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲಬರ್ಗಾ ಇವರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 26.11.2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸದೆ ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ 9526–27/2005ನ್ನು ದಾಖಲಿಸಿದ್ದು ಸದರಿ ಅರ್ಜಿಯನ್ನು ಆಡಳಿತ ನ್ಯಾಯ ಮಂಡಳಿಯು ದಿನಾಂಕ 31.10.2008ರ ಆದೇಶದಲ್ಲಿ ವಜಾಗೊಳಿಸಿರುತ್ತದೆ. ಅರ್ಜಿದಾರರು ತದನಂತರ ಪರಿಷ್ಕರಣ ಮೇಲ್ಮನವಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ದುರ್ನಡತೆ, ಬೇಜವಾಬ್ದಾರಿತನ ಹಾಗೂ ಘೋರ ನಿರ್ಲಕ್ಷ್ಯತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 94 ಪೊಸಿಅ 2008 ಬೆಂಗಳೂರು, ದಿನಾಂಕ: 10.10.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸೈಯದ್ ಹಮೀದುದ್ದೀನ್, ಮಾಜಿ ಪಿಸಿ–2231, ವಡಗೆರ ಪೊಲೀಸ್ ಠಾಣೆ, ಗುಲಬರ್ಗಾ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.1102

SC.30

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ರಘುನಂದನ, ಪಿಸಿ–131, ಪಶ್ಚಿಮ ಪೊಲೀಸ್ ಠಾಣೆ, ರಾಯಚೂರು ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ರಾಯಚೂರು ಜಿಲ್ಲೆ ಇವರ ಆದೇಶ ಸಂಖ್ಯೆ: ಸಿಬ್ಬಂದಿ(3)/ಇವಿ/44/2006 (ಒ.ಬಿ. ಸಂಖ್ಯೆ: 230/2011–12) ದಿನಾಂಕ 07.01.2012

2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲಬರ್ಗಾ ಇವರ ಆದೇಶ ಸಂಖ್ಯೆ ಅಪೀಲು/42/ಈವ/2006/4059 (ಆ.ಪು.ಸಂ.518/ಈವ/2012) ದಿನಾಂಕ 29.11.2012

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 23.02.2013

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)90/2012–13 ದಿನಾಂಕ: 19.06.2013

**ಪ್ರಸ್ತಾವನೆ:**

ಶ್ರೀ ರಘುನಂದನ, ಪಿಸಿ–131, ಪಶ್ಚಿಮ ಪೊಲೀಸ್ ಠಾಣೆ, ರಾಯಚೂರು ಜಿಲ್ಲೆ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಹಿಂದೆ ಸದರಬಜಾರ ಪೊಲೀಸ್ ಠಾಣೆಯಲ್ಲಿ ಕರ್ತವ್ಯದಲ್ಲಿದ್ದಾಗ ತನ್ನ ಪತ್ನಿಗೆ ಮಾನಸಿಕ, ದೈಹಿಕ ಹಾಗೂ ವರದಕ್ಷಿಣೆ ಕಿರುಕುಳ ನೀಡಿ ಪತ್ನಿಯು ಆತ್ಮಹತ್ಯೆ ಮಾಡಿಕೊಂಡ ಹಿನ್ನಲೆಯಲ್ಲಿ ತಮ್ಮ ಕರ್ತವ್ಯದಲ್ಲಿ ಅಶಿಸ್ತು ಮತ್ತು ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ರಘನಂದನ ಸಿಪಿಸಿ–131 ಸದರಬಜಾರ ಪೊಲೀಸ್ ಠಾಣೆ ರವರ ನೀವು ರಾಯಚೂರಿನಲ್ಲಿ ಮನೆ ಮಾಡಿಕೊಂಡಿರುವಾಗ ನಿಮ್ಮ ಹೆಂಡತಿ ಶ್ರೀಮತಿ ಸಿಂಧು ಅಲಿಯಾಸ್ ಸುಧಾ ರವರಿಗೆ ವಿನಾ ಕಾರಣ ಅವಾಚ್ಯ ಶಬ್ದಗಳಿಂದ ಬೈಯುವುದು ಸಂಶಯದಿಂದ ನೋಡುವುದು ಅವಹೇಳನ ಮಾಡುವುದಲ್ಲದೇ ಮಾನಸಿಕ ದೈಹಿಕ ಕಿರುಕುಳ ಕೊಡುತ್ತಿದ್ದುದ್ದರಿಂದ ಇದನ್ನು ತಾಳಲಾರದೆ ನಿಮ್ಮ ಹೆಂಡತಿಯು ದಿನಾಂಕ: 25.12.2000 ರಂದು ಸಂಜೆ 5 ಗಂಟೆಗೆ ನೀವು ವಾಸವಿರುವ ಮನೆಯಲ್ಲಿ ನೀವು ಎಣ್ಣೆ ಸುರಿದುಕೊಂಡು ಬೆಂಕಿಹಚ್ಚಿಕೊಂಡು ಅತ್ತು ಹತ್ಯೆಗೆ ಪ್ರಯತ್ನಿಸಿ ವಿಫಲಗೊಂಡು ಸರ್ಕಾರಿ ಆಸ್ಪತ್ರೆ ರಾಯಚೂರಿನಲ್ಲಿ ಚಿಕಿತ್ಸೆಗೆ ಸೇರಿದ ಬಗ್ಗೆ ನೇತಾಜಿ ನಗರ ಪೊಲೀಸ್ ಠಾಣೆ ರಾಯಚೂರು ರವರ ಮುಂದೆ ನಿಮ್ಮ ಹೆಂಡತಿ ನೀಡಿದ ಹೇಳಿಕೆ ಮೇಲಿಂದ ನಿಮ್ಮ ವಿರುದ್ಧ ನೇತಾಜಿ ನಗರ ಪೊಲೀಸ್ ಠಾಣೆಯಲ್ಲಿ ಗುನ್ನೆ ನಂ:2000 ಕಲಂ 498(ಎ), 109 ರ:ವಿ 34 ಐಪಿಸಿ ಪ್ರಕರಣ ದಾಖಲಾಗಿದ್ದು ನಂತರ ನಿಮ್ಮ ಹೆಂಡತಿಯು ಆಸ್ಪತ್ರೆಯಲ್ಲಿ, ಉಪಚಾರ ಹೊಂದುತ್ತಿರುವಾಗ ದಿನಾಂಕ: 30.12.2000 ರಂದು ಮೃತಪಟ್ಟಿದ್ದು ಇರುತ್ತದೆ. ಕಾರಣ ನಿಮ್ಮ ಹೆಂಡತಿಯ ಮಾನಸಿಕ ಹಾಗೂ ದೈಹಿಕ ಹಿಂಸೆಗಳಿಗೆ ನೀವು ಕಾರಣರಾಗಿದ್ದಲ್ಲದೆ ಸದರಿಯವರ ಆತ್ಮಹತ್ಯೆ ಪ್ರಯತ್ನ ಹಾಗೂ ಮರಣಕ್ಕೆ ನೀವೆ ಕಾರಣರಾಗಿರುತ್ತೀರಿ.

ಶ್ರೀ ರಘುನಂದನ ಸಿಪಿಸಿ–131 ರವರ ವರದಕ್ಷಿಣೆ ಪಡೆಯುವುದು ಅಪರಾಧ ಎಂದು ಗೊತ್ತಿದ್ದು ಶ್ರೀಮತಿ ಸಿಂಧು ಅಲಿಯಾಸ್ ಸುಧಾಳೊಂದಿಗೆ ಲಗ್ನವಾಗಿದ್ದು, ಲಗ್ನದ ಬಾಬತ್ತು ನಗದು ಹಣ ರೂ.35,000/– ಬಂಗಾರ, ಬೆಳ್ಳಿ ಸಾಮಾನು ಹಾಗೂ ಇತರೆ ವಸ್ತುಗಳನ್ನು ವರದಕ್ಷಿಣೆ ರೂಪದಲ್ಲಿ ಪಡೆದುಕೊಂಡಿದ್ದು, ನೀವು ಸರ್ಕಾರಿ ನೌಕರರಾಗಿಯೂ, ಕಲಂ 14(ಎ) ಕೆಸಿಎಸ್ ಆರ್(ನಿರ್ವಹಣೆ) 1966ರ ಪ್ರಕಾರ ವರದಕ್ಷಿಣೆ ಪಡೆದುಕೊಳ್ಳುವುದು ಕಾನೂನಿನ ವಿರುದ್ಧ ಎಂದು ಗೊತ್ತಿದ್ದು ಸ್ವತಹ ಶ್ರೀಮತಿ ಸಿಂಧು ಅಲಿಯಾಸ್ ಸುಧಾಳನ್ನು ಮದುವೆಯಾಗುದಕ್ಕೆ ಮೃತ ಪಟ್ಟ ಶ್ರೀಮತಿ ಸಿಂಧು ಅಲಿಯಾಸ್ ಸುಧಾಳ ಮನೆಯವರಿಂದ ವರದಕ್ಷಿಣೆ ಪಡೆದಿರುತ್ತೀರಿ.

ಶಿಸ್ತು ಮತ್ತು ಕಾನೂನು ಪಾಲನೆ ಮಾಡುವಂತ ಪೊಲೀಸ್ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ನೀವು ಕಾನೂನಿನ ವಿರುದ್ಧವಾಗಿ ವರ್ತಿಸಿದ್ದು, ಅಪರಾಧ ಮನೋಭಾವದಿಂದ ವರ್ತಿಸಿದ್ದಲ್ಲದೇ ಸುತ್ತೋಲೆ ಸಂ. ಸಿಆಸುಇ: 6: ಸೇನಿಸ: 94: ದಿ:16. 05.1994ರ ಪ್ರಕಾರ ಸರ್ಕಾರಿ ನೌಕರನು ತನ್ನ ಹೆಂಡತಿ ಮತ್ತು ಮಕ್ಕಳನ್ನು ಆಲಕ್ಷಿಸಿ ಯೋಗ್ಯ ರೀತಿಯಲ್ಲಿ ನೋಡಿಕೊಳ್ಳದೆ ಅಸಭ್ಯ ತೋರಿದರೆ ಅಂತಹ ಸರ್ಕಾರಿ ನೌಕರನ ನಡತೆಯನ್ನು ತೀವ್ರವಾಗಿ ಪರಿಗಣಿಸಿ ಶಿಸ್ತಿನ ಕ್ರಮಕ್ಕೆ ಒಳಪಡಿಸಬಹುದೆಂದು ಆದೇಶವಾಗಿದ್ದಾಗ್ಯೂ ಈ ಆದೇಶವನ್ನು ಉಲ್ಲಂಘನೆ ಮಾಡಿ ದಿನಾಂಕ: 27.12.2000 ರಂದು ದಸ್ತಗಿರಿಯಾಗಿ ನ್ಯಾಯಾಂಗ ಬಂಧನಕ್ಕೆ ಒಳಪಟ್ಟು ನಿಮ್ಮ ದುರ್ನನಡತೆಯಿಂದ ಇಲಾಖೆಗೆ ಕಳಂಕ ಪ್ರಾಯರಾಗಿ ವರ್ತಿಸಿದ್ದೀರಿ"

ಅರ್ಜಿದಾರರ ವಿರುದ್ಧ ದಾಖಲಾಗಿದ್ದು ಕ್ರಿಮಿನಲ್ ಮೊಕದ್ದಮೆ ಸಂಖ್ಯೆ 69/2000ರಲ್ಲಿ ನ್ಯಾಯಾಲಯದ ದಂಡನೆಗೊಳಗಾದ ಹಿನ್ನಲೆಯಲ್ಲಿ ಸರ್ಕಾರದ ಸುತ್ತೋಲೆ ಸಂಖ್ಯೆ ಸಿಆಸುಇ/9/ಸೇಇವಿ/95 ದಿನಾಂಕ 26.06.1996ರನ್ವಯ ಪೊಲೀಸ್ ಅಧೀಕ್ಷಕರು, ರಾಯಚೂರು ಇವರು ದಿನಾಂಕ 06.04.2006ರಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿರುತ್ತಾರೆ. ಕರ್ನಾಟಕ ಉಚ್ಚ ನ್ಯಾಯಾಲಯ, ಸಂಚಾರಿ ಪೀಠ ಗುಲಬರ್ಗಾ ಇಲ್ಲಿ ದಾಖಲಾದ ಅಪೀಲು ಸಂಖ್ಯೆ 2097/2005ರ ದಿನಾಂಕ 14.07.2010ರ ಆದೇಶದಲ್ಲಿ ಅರ್ಜಿದಾರರನ್ನು ಖುಲಾಸೆ ಗೊಳಿಸಿದ ಹಿನ್ನಲೆಯಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ ಅಪೀಲು(4)/75/2010–11 ದಿನಾಂಕ 25.11.2011ರನ್ವಯ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ರಾಯಚೂರು ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 07.01.2012ರ ಆದೇಶದಲ್ಲಿ ಅರ್ಜಿದಾರರನ್ನು ಪುನಃ ಸೇವೆಗೆ ತೆಗೆದುಕೊಂಡು ಬಕ್ಕಲ್ ನಂ.513ನ್ನು ಹಂಚಿಕೆ ಮಾಡಿ ಇವರು ಕರ್ತವ್ಯದಿಂದ ಹೊರಗುಳಿದ ಅವಧಿ 06.04.2006ರಿಂದ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವವರೆಗಿನ ಅವಧಿಯನ್ನು ಡೈಸ್–ನಾನ್ ಎಂದು ಪರಿಗಣಿಸಲಾದ ದಂಡನೆಯನ್ನು ವಿಧಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲಬರ್ಗಾ ಇವರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 29.11.2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಅಶಿಸ್ತು ಹಾಗೂ ದುರ್ನಡತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಅರ್ಜಿದಾರರ ವೈಯಕ್ತಿಕ ತಪ್ಪಿನಿಂದಾಗಿ ಅಪರಾಧ ಪ್ರಕರಣಗಳಲ್ಲಿ ಸಿಲುಕಿ ಸೇವೆಯಿಂದ ಹೊರಗುಳಿದ ಹಿನ್ನಲೆಯಲ್ಲಿ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 37 ಪೊಸಿಅ 2013 ಬೆಂಗಳೂರು, ದಿನಾಂಕ: 10.10.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರಘುನಂದನ, ಪಿಸಿ–131, ಪಶ್ಚಿಮ ಪೊಲೀಸ್ ಠಾಣೆ, ರಾಯಚೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.1110**

**SC.30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಬಸವನಗೌಡ ಆರ್, ಪಿಸಿ–539, ಎಫ್, 7ನೇ ಪಡೆದ, ಕೆ.ಎಸ್.ಆರ್.ಪಿ., ಮಂಗಳೂರು ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಕಮಾಂಡೆಂಟ್, 7ನೇ ಪಡೆ, ಕರಾಮೀಪೊ, ಮಂಗಳೂರು ಇವರ ಆದೇಶ ಸಂಖ್ಯೆ 35/ಇವಿ7/2012–13 (ಕ.ಆ.ಸಂ.23/2012–13) ದಿನಾಂಕ 15.06.2013
2) ಮೇಲ್ಮನವಿ ಪ್ರಾಧಿಕಾರ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು ಇವರ ಆದೇಶ ಸಂಖ್ಯೆ ಅಪೀಲು/17/2012–13 ದಿನಾಂಕ 19.02.2013
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 15.05.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)8/2013–14 ದಿನಾಂಕ 06.08.2013

**ಪ್ರಸ್ತಾವನೆ:**

ಶ್ರೀ ಬಸವನಗೌಡ ಆರ್, ಪಿಸಿ–539, ಎಫ್, 7ನೇ ಪಡೆದ, ಕೆ.ಎಸ್.ಆರ್.ಪಿ., ಮಂಗಳೂರು ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ನಿರ್ಲಕ್ಷತೆ, ಬೇಜವಾಬ್ದಾರಿ, ದುರ್ನಡತೆ ಹಾಗೂ ಅಶಿಸ್ತು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ದ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಬಸವನಗೌಡ. ಆರ್. ಪಿ.ಸಿ–539, ಎಫ್. 7ನೇ ಪಡೆ, ಕರ್ನಾಟಕ ರಾಜ್ಯ ಮೀಸಲು ಪೊಲೀಸ್, ಮಂಗಳೂರು, ಆದ ನೀವು ದಿನಾಂಕ: 13.03.2012 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿ ಕರ್ತವ್ಯ ನಿರ್ಲಕ್ಷ್ಯತೆ, ಬೇಜವಾಬ್ದಾರಿ ದುರ್ನಡತೆ ಮತ್ತು ಅಶಿಸ್ತು ಪ್ರದರ್ಶಿಸಿರುತ್ತೀರಿ"

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಕಮಾಂಡೆಂಟ್, 7ನೇ ಪಡೆ, ಕರಾಮೀಪೊ, ಮಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 15.06.2012ರ ಆದೇಶದಲ್ಲಿ ದಿನಾಂಕ 13.03.2012ರಿಂದ 18.04.2012ರವರೆಗೆ 37 ದಿನಗಳು ಕರ್ತವ್ಯಕ್ಕೆ ಗೈರುಹಾಜರಾದ ಅವಧಿಯನ್ನು ವೇತನ ರಹಿತ ರಜೆಯನ್ನಾಗಿ ಸಕ್ರಮಿಸಿ "ವಾಗ್ದಂಡನೆ" ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 19.02.2013ರ ಆದೇಶದಲ್ಲಿ ಅರ್ಜಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 59 ಪೊಸಿಅ 2013 ಬೆಂಗಳೂರು, ದಿನಾಂಕ: 10.10.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಸವನಗೌಡ ಆರ್, ಪಿಸಿ–539, ಎಫ್, 7ನೇ ಪಡೆದ, ಕೆ.ಎಸ್.ಆರ್.ಪಿ., ಮಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.1111**
**SC.30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಆರ್. ಶಿವರಾಮ್, ಪಿಸಿ–628, ವೈ.ಎನ್. ಹೊಸಕೋಟೆ ಪೊಲೀಸ್ ಠಾಣೆ, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ ಇವರ ಆದೇಶ ಸಂಖ್ಯೆ: ಸಿಬ್ಬಂದಿ(4)ಪನ್ನಿ/ಡಿಇ/08/2009 (ಒ.ಬಿ. ಸಂಖ್ಯೆ: 381/2011) ದಿನಾಂಕ 30.09.2011
2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ ಅಪೀಲು/67/ಪನ್ನಿ/2011–12 (ಒ.ಬಿ. ಸಂಖ್ಯೆ: 66/2012–13) ದಿನಾಂಕ 11.09.2012

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 20.11.2012

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)53/2012–13 ದಿನಾಂಕ: 20.08.2013

**ಪ್ರಸ್ತಾವನೆ:**

ಶ್ರೀ ಆರ್. ಶಿವರಾಮ್, ಪಿಸಿ–628, ವೈ.ಎನ್. ಹೊಸಕೋಟೆ ಪೊಲೀಸ್ ಠಾಣೆ, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಹಿಂದೆ ನೊಣವಿನಕೆರೆ ಪೊಲೀಸ್ ಠಾಣೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಅಧಿಕಾರ ದುರುಪಯೋಗ, ಅತೀವ ದುರ್ನಡತೆ ಎಸಗಿರುವ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ಮತ್ತು 8ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ

**ದೋಷಾರೋಪಣೆ:–**

"ದಿನಾಂಕ 16.03.2008ರಂದು ನೀವುಗಳು ಮತ್ತು ತಿಪಟೂರಿನ ಸುದರ್ಶನ, ಮಲ್ಲಿಕಾರ್ಜುನಸ್ವಾಮಿ ಮತ್ತು ವೆಂಕಟೇಶ್ ಇವರೊಂದಿಗೆ ಸೇರಿಕೊಂಡು ತುರುವೇಕೆರೆ ತಾಲ್ಲೂಕ್, ಕಸಬಾ ಹೋಬಳಿ ಕಾಳಂಜಿಹಳ್ಳಿಯ ವಾಸಿ ಕೆ.ಆರ್. ಮಹಲಿಂಗಪ್ಪ ಮತ್ತು ಕೊಟ್ಟೂರು ಕೊಟ್ಟಿಗೆ ಗ್ರಾಮದ ವಾಸಿ ಕೃಷ್ಣಪ್ಪ ಎಂಬುವವರಿಗೆ ಕಡಿಮೆ ಬೆಲೆಗೆ ಚಿನ್ನದ ಗಟ್ಟಿಯನ್ನು ಕೊಡಿಸುತ್ತೇವೆಂದು ನಂಬಿಸಿ, ಅವರಿಂದ 2,50,000/– (ಎರಡು ಲಕ್ಷ ಐವತ್ತು ಸಾವಿರ ರೂ ಹಣದ ಚೆಕ್ಕನ್ನು ಹೆದರಿಸಿ ಅವರಿಂದ ಕಿತ್ತುಕೊಂಡು ಹೋಗಿರುತ್ತೀರಿ, ನೀವು ಪೊಲೀಸ್ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ತಾನೊಬ್ಬ ಸಾರ್ವಜನಿಕ ನೌಕರ ಎಂಬುದನ್ನು ಮರೆತು ಸಾರ್ವಜನಿಕರಿಗೆ ರಕ್ಷಣೆ ಕೊಡಬೇಕಾದ ನೀವುಗಳೇ ಸಮಾಜಘಾತಕರೊಂದಿಗೆ ಭಾಗಿಯಾಗಿ ಇಲಾಖೆಗೆ ಅಗೌರವ ತಂದಿರುತ್ತೀರಿ. ಈ ಬಗ್ಗೆ ನಿಮ್ಮಗಳ ವಿರುದ್ಧ ತಿಪಟೂರು ನಗರ ಪೊಲೀಸ್ ಠಾಣೆಯಲ್ಲಿ ಮೊ.ನಂ. 75/2008 ಕಲಂ 384, 420 ಐಪಿಸಿ ರೀತ್ಯಾ ಪ್ರಕರಣ ದಾಖಲಾಗಿರುತ್ತೆ. ಶಿಸ್ತಿನ ಇಲಾಖೆಯಲ್ಲಿದ್ದುಕೊಂಡು ಕರ್ತವ್ಯ ದುರುಪಯೋಗ ಮತ್ತು ಅತೀವ ದುರ್ನಡತೆ ತೋರಿರುತ್ತೀರಿ".

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 30.09.2011ರ ಆದೇಶದಲ್ಲಿ ಅರ್ಜಿದಾರರಿಗೆ ಅವರ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗುವಂತೆ 03 (ಮೂರು) ವರ್ಷಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 11.09.2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಅಧಿಕಾರ ದುರುಪಯೋಗ, ಅತೀವ ದುರ್ನಡತೆ ಎಸಗಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 129 ಪೊಸಿಅ 2012 ಬೆಂಗಳೂರು, ದಿನಾಂಕ: 29.10.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್. ಶಿವರಾಮ್, ಪಿಸಿ–628, ವೈ.ಎನ್. ಹೊಸಕೋಟೆ ಪೊಲೀಸ್ ಠಾಣೆ, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಗಳನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.1103

SC.30

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎ. ಕೃಷ್ಣಮೂರ್ತಿ, ಪಿಸಿ–847, ದೊಡ್ಡಬಳ್ಳಾಪುರ ಟೌನ್ ಪೊಲೀಸ್ ಠಾಣೆ, ಬೆಂಗಳೂರು ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ರಾಮನಗರ ಜಿಲ್ಲೆ, ಇವರ ಆದೇಶ ಸಂಖ್ಯೆ ಸಿಬ್ಬಂದಿ(2)/ಶಿಕ್ಷೆ/06/2009 (ಒ.ಬಿ. ಸಂಖ್ಯೆ 99/2011) ದಿನಾಂಕ 29.03.2011

2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ ಅಪೀಲು/19/ಶಿಕ್ಷೆ/2011–12 (ಒ.ಬಿ. ಸಂಖ್ಯೆ 106/2012–13) ದಿನಾಂಕ 26.10.2012

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 11.03.2013

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)91/2012–13 ದಿನಾಂಕ: 07.06.2013 ಮತ್ತು 23.07.2013

**ಪ್ರಸ್ತಾವನೆ:**

ಶ್ರೀ ಎ. ಕೃಷ್ಣಮೂರ್ತಿ, ಪಿಸಿ–847, ದೊಡ್ಡಬಳ್ಳಾಪುರ ಟೌನ್ ಪೊಲೀಸ್ ಠಾಣೆ, ಬೆಂಗಳೂರು ಜಿಲ್ಲೆ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಹಿಂದೆ ಚನ್ನಪಟ್ಟಣ ಪೂರ್ವ ಪೊಲೀಸ್ ಠಾಣೆ, ರಾಮನಗರ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಹಾಗೂ ಉದಾಸೀನತೆಯನ್ನು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಕೃಷ್ಣಮೂರ್ತಿ, ಸಿಪಿಸಿ–847, ಚನ್ನಪಟ್ಟಣ ಪೂರ್ವ ಪೊಲೀಸ್ ಠಾಣೆ, ಆದ ನೀವು ದಿನಾಂಕ 07.01.2009ರಂದು ಠಾಣೆಯಲ್ಲಿ ಪಹರೆ ಕರ್ತವ್ಯ ನಿರ್ವಹಿಸುತ್ತಿದ್ದಾಗ ಪಿಎಸ್ಐಡಿ, ಎಂ. ಪ್ರಶಾಂತ್ ಬಾಬುರವರು ಅದೇ ದಿನ ಮಧ್ಯಾಹ್ನ 1–45 ಗಂಟೆ ಸಮಯದಲ್ಲಿ ಠಾಣಾ ಗಸ್ತು ಕರ್ತವ್ಯದಲ್ಲಿದ್ದಾಗ ಠಾಣಾ ಕಳವು ಪ್ರಕರಣಗಳಲ್ಲಿ ಗುಮಾನಿ ಆಸಾಮಿ ಕಲೀಲ್, ಟಿಪ್ಪುನಗರ, ಚೆನ್ನಪಟ್ಟಣ ಟೌನ್ ಈತನನ್ನು ದುಬೈ ಕಾಂಡಿಮೆಂಟ್ಸ್ ಬಳಿ ಪತ್ತೆ ಹಚ್ಚಿ ಹಿಡಿದು ಠಾಣೆಗೆ ಕರೆದುಕೊಂಡು ಬಂದಿದ್ದು, ಠಾಣೆಯಲ್ಲಿ ಸಿ.ಪಿ.ಐ.ರವರ ಸಮ್ಮುಖದಲ್ಲಿ ಸಂಚಾರ ಸಪ್ತಾಹ ಅಂಗವಾಗಿ ಆಟೋ ಚಾಲಕರ ಮತ್ತು ಮಾಲೀಕರ ಸಭೆ ಕರೆದಿದ್ದು, ಸಭೆ ಮುಗಿದ ನಂತರ ಆರೋಪಿಯನ್ನು ವಿಚಾರಣೆ ಮಾಡಲೆಂದು ಠಾಣೆಯಲ್ಲಿ ಕೂರಿಸಿ ಮಧ್ಯಾಹ್ನ 12–00 ಗಂಟೆಯಿಂದ ಸಂಜೆ 6–00 ಗಂಟೆಯವರೆಗೆ ಠಾಣೆ ಪಹರೆ ಕರ್ತವ್ಯದಲ್ಲಿದ್ದ ನಿಮಗೆ ಎಚ್ಚರಿಕೆಯಿಂದ ನೋಡಿಕೊಳ್ಳುವಂತೆ ತಿಳಿಸಿ ಹೋಗಿದ್ದು, ಸಂಜೆ 4–00 ಗಂಟೆಗೆ ಗುಮಾನಿ ಆಸಾಮಿ ಕಲೀಲ್‌ನನ್ನು ವಿಚಾರಣೆ ಮಾಡುವ ಸಲುವಾಗಿ ಪಿ.ಎಸ್.ಐ.ರವರು ಠಾಣೆಗೆ ಬಂದಾಗ ಠಾಣೆಯಲ್ಲಿದ್ದ ಎ.ಎಸ್.ಐ. ನಾಗಶಂಕರಯ್ಯರವರು ಗುಮಾನಿ ಆಸಾಮಿ ಕಲೀಲ್ ಕಕ್ಕಸು ಮಾಡಬೇಕೆಂದು ಕೇಳಿದಾಗ ಪಿಸಿ–847, ಆದ ನೀವು ಯಾವುದೇ ರೀತಿಯ ಜವಾಬ್ದಾರಿಯಿಲ್ಲದೆ ನಿರ್ಲಕ್ಷತನದಿಂದ ಗುಮಾನಿ ಆಸಾಮಿಗೆ ಅಲ್ಲಿ ಬಕೇಟ್ ಇದೆ. ಹೊರಗಡೆ ತೊಟ್ಟಿಯಲ್ಲಿ ನೀರು ತುಂಬಿಕೊಂಡು ಹೋಗು ಎಂದು ಠಾಣೆಯಿಂದ ಹೊರಗಡೆ ಕಳುಹಿಸಿದ ಕಾರಣ ಗುಮಾನಿ ಆಸಾಮಿ ಕಲೀಲ್ ಪರಾರಿಯಾಗಿರುತ್ತಾನೆ. ನಿಮಗೆ ಕಲೀಲ್ ಬಗ್ಗೆ ಎಚ್ಚರಿಕೆಯಿಂದ ನೋಡಿಕೊಳ್ಳುವಂತೆ ತಿಳಿಸಿದ್ದರೂ ಸಹಾ ಗುಮಾನಿ ಆಸಾಮಿ ಪರಾರಿಯಾಗಲು ಕಾರಣರಾಗಿ ನಿಮ್ಮ ಕರ್ತವ್ಯದಲ್ಲಿ ಅಸಡ್ಡೆತನ, ಉದಾಸೀನತೆ ತೋರಿ ತೀವ್ರತರವಾದ ಕರ್ತವ್ಯಲೋಪ ಎಸಗಿರುವುದು ಕಂಡುಬಂದಿರುತ್ತೆ ಎಂತಾ ಆರೋಪಿಸಿರುತ್ತೆ."

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ರಾಮನಗರ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ 29.03.2011ರ ಆದೇಶದಲ್ಲಿ ಅರ್ಜಿದಾರರ ಅಮಾನತ್ತಿನ ಅವಧಿ ದಿನಾಂಕ 10.01.2009ರಿಂದ 28.02.2009ರವರೆಗಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿ, ಇವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗುವಂತೆ 2 (ಎರಡು) ವರ್ಷಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 26.10.2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿದೆ.

ಈ ಎರಡೂ ಆದೇಶಗಳ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಪರಿಷ್ಕರಣ ಮೇಲ್ಮನವಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಹಾಗೂ ಉದಾಸೀನತೆಯನ್ನು ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 40 ಪೊಸಿಅ 2013 ಬೆಂಗಳೂರು, ದಿನಾಂಕ: 29.10.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎ. ಕೃಷ್ಣಮೂರ್ತಿ, ಪಿಸಿ–847, ದೊಡ್ಡಬಳ್ಳಾಪುರ ಟೌನ್ ಪೊಲೀಸ್ ಠಾಣೆ, ಬೆಂಗಳೂರು ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.1104

SC.30

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಬಿ. ದೇವರಾಜ್, ಪಿಎಸ್ಐ., ವಿನೋಬನಗರ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ ಇವರ ಆದೇಶ ಸಂಖ್ಯೆ ಸಿಬ್ಬಂದಿ(4)/ಶಿಕ್ಷೆ/02/2013 (ಒ.ಬಿ.ಸಂ.144/2013) ದಿನಾಂಕ 15.03.2013

2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರ ಆದೇಶ ಸಂಖ್ಯೆ 06/ಅಪೀಲು/ಸಿಬ್ಬಂದಿ–2/2013–14 (ಒ.ಬಿ.ಸಂ. 53/2013–14), ದಿನಾಂಕ 27.06.2013

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 09.07.2013

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)25/2013–14 ದಿನಾಂಕ 06.09.2013

**ಪ್ರಸ್ತಾವನೆ:**

ಶ್ರೀ ಬಿ. ದೇವರಾಜ್, ಪಿಎಸ್ಐ., ವಿನೋಬನಗರ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತನ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ದಿನಾಂಕ 24.11.2012ರಂದು ಸಾಯಂಕಾಲ 4–30 ಗಂಟೆಗೆ ಗುನ್ನೆ ನಂ. 312/2012 ಕಲಂ: 324, 504, 506 ಐಪಿಸಿ ರೀತ್ಯ ಪ್ರಕರಣ ದಾಖಲಾಗಿದ್ದು, ಅದೇ ದಿನ ಮುಂದಿನ ತನಿಖೆಯನ್ನು ತೆಗೆದುಕೊಂಡ ನೀವು ಪಿರ್ಯಾದಿನಲ್ಲಿ ಗಾಯಾಳು ಮಣಿಪಾಲದಲ್ಲಿ ಇಲಾಜು ಪಡೆಯುತ್ತಿದ್ದಾನೆಂದು ತಿಳಿಸಿದ್ದರೂ ಸಹ ಪ್ರಕರಣದ ತೀವ್ರತೆಯನ್ನು ಅರಿತುಕೊಂಡು ಕೇವಲ ಠಾಣೆಯಿಂದ 10 ಕಿ.ಮೀ. ದೂರದಲ್ಲಿರುವ ಕೃತ್ಯ ನಡೆದ ಸ್ಥಳಕ್ಕೆ ಭೇಟಿ ನೀಡಿರುವುದಿಲ್ಲ. ಮತ್ತು ಮಣಿಪಾಲಕ್ಕೆ ಖುದ್ದಾಗಲೀ, ಸಿಬ್ಬಂದಿಯನ್ನು ಕಳುಹಿಸಿಯಾಗಲೀ ಗಾಯಾಳುವಿನ ಹೇಳಿಕೆ ದಾಖಲು ಮಾಡಲು ಕ್ರಮ ಕೈಗೊಂಡಿರುವುದಿಲ್ಲ. ದಿನಾಂಕ: 26.11.2012 ರಂದು 2 ದಿನ ವಿಳಂಬ ಮಾಡಿ ಸ್ಥಳಕ್ಕೆ ಹೋಗಿರುತ್ತೀರಿ. ಸ್ಥಳ ಪಂಚನಾಮೆಯಲ್ಲಿ ಪ್ರತ್ಯಕ್ಷ ಸಾಕ್ಷಿ ಮೃತನ ಸಂಬಂಧಿ ಬಾಬು ಎಂಬಾತನನ್ನು ಪಂಚರನ್ನಾಗಿ ತೆಗೆದುಕೊಂಡಿರುತ್ತೀರಿ. ಮತ್ತು ದಿನಾಂಕ: 27.11.2012 ರಂದು ಗಾಯಾಳು ಸುರೇಶ ಎಂದು ನಮೂದಿಸಿ ನ್ಯಾಯಾಲಯಕ್ಕೆ ಸಲ್ಲಿಸಿರುತ್ತೀರಿ. ತನ್ಮೂಲಕ ಕರ್ತವ್ಯದಲ್ಲಿ ತೀವ್ರ ತರನಾದ ನಿರ್ಲಕ್ಷತನ ಮತ್ತು ಬೇಜವಾಬ್ದಾರಿ ಪ್ರದರ್ಶಿಸಿರುತ್ತೀರೆಂದು ಆರೋಪಣೆ"

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 15.03.2013ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗೆ ಧಕ್ಕೆಯಾಗದಂತೆ 3(ಮೂರು) ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 27.06.2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತನ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 86 ಪೊಸಿಅ 2013 ಬೆಂಗಳೂರು, ದಿನಾಂಕ: 29.10.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ. ದೇವರಾಜ್, ಪಿಎಸ್ಐ., ವಿನೋಬನಗರ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.1105
SC.30

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಆರ್. ಮುನಿಮಾರಯ್ಯ, ಎ.ಎಸ್.ಐ., ಅತ್ತಿಬೆಲೆ ಪೊಲೀಸ್ ಠಾಣೆ, ಬೆಂಗಳೂರು ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಬೆಂಗಳೂರು ಜಿಲ್ಲೆ ಇವರ ಆದೇಶ ಸಂಖ್ಯೆ 31/ಡಿಇ/2011 (ಒ.ಬಿ.ಸಂಖ್ಯೆ: 280/2011) ದಿನಾಂಕ 02.09.2011

2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ ಅಪೀಲು/48/ಪನ್ನಿ/2011–12 (ಒ.ಬಿ. ಸಂಖ್ಯೆ: 122/2011–12) ದಿನಾಂಕ 05.03.2012

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 28.02.2013

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)89/2012–13 ದಿನಾಂಕ 27.04.2013

5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 115 ಸಿಎನ್‌ಎಸ್ 2013 ದಿನಾಂಕ: 30.09.2013

**ಪ್ರಸ್ತಾವನೆ:**

ಶ್ರೀ ಆರ್. ಮುನಿಮಾರಯ್ಯ, ಎ.ಎಸ್.ಐ., ಅತ್ತಿಬೆಲೆ ಪೊಲೀಸ್ ಠಾಣೆ, ಬೆಂಗಳೂರು ಜಿಲ್ಲೆ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಬೇಜವಾಬ್ದಾರಿತನ, ಹಾಗೂ ನಿರ್ಲಕ್ಷತೆ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಆರ್. ಮುನಿಮಾರಯ್ಯ, ಎ.ಎಸ್.ಐ., ಆದ ನೀವು, ಅತ್ತಿಬೆಲೆ ಪೊಲೀಸ್ ಠಾಣೆ, ಬೆಂಗಳೂರು ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿರುತ್ತೀರಿ. ನೀವು ದಿನಾಂಕ 06.07.2001ರಂದು ಠಾಣಾ ಪ್ರಭಾರ ಕರ್ತವ್ಯದಲ್ಲಿರುವಾಗ ಶ್ರೀ ಸೀತಾರಾಮ್ ಬಿನ್ ಶಾಂತಪ್ಪ, ಪಟ್ಟಾಲಮ್ಮ ಬಡಾವಣೆ, ಅತ್ತಿಬೆಲೆ ಟೌನ್, ಆನೇಕಲ್ ತಾಲ್ಲೂಕುರವರು ಠಾಣೆಗೆ ಹಾಜರಾಗಿ ತಮ್ಮ ಮಗಳು ಪ್ರಿಯಾಂಕ ವಯಸ್ಸು 16 ವರ್ಷ ಈಕೆಯನ್ನು ದಿನಾಂಕ 12.06.2011ರಂದು ಚನ್ನರಾಯಪಟ್ಟಣ ಹೋಬಳಿ ಕಗ್ಗಲಹಳ್ಳಿ ಗ್ರಾಮದ ಶ್ರೀ ಶನಿಮಹಾತ್ಮಸ್ವಾಮಿ ದೇವಾಲಯಕ್ಕೆ ತಮ್ಮ ಜೊತೆಯಲ್ಲಿ ಕರೆದುಕೊಂಡು ಹೋಗಿದ್ದಾಗ ಕಗ್ಗಲಹಳ್ಳಿ ಬಸ್ ನಿಲ್ದಾಣದಿಂದ ಕಾಣೆಯಾಗಿರುತ್ತಾಳೆ. ತನ್ನ ಮಗಳು ಕಾಣೆಯಾಗಿರುವ ಬಗ್ಗೆ, ಪತ್ತೆ ಮಾಡಿಕೊಡಬೇಕೆಂದು ದೂರು ನೀಡಿದ್ದು, ದೂರನ್ನ ಸ್ವೀಕರಿಸಿ ಪ್ರಕರಣವನ್ನು ದಾಖಲಿಸಿರುವುಲ್ಲ. ಮಾರನೇ ದಿನ ದಿನಾಂಕ 07.07.2011ರಂದು ಬೆಳಿಗ್ಗೆ 11:30 ಗಂಟೆಗೆ ಮೇಲ್ಕಂಡ ಪಿರ್ಯಾದಿನ ಮೇರೆಗೆ ಠಾಣಾ ಮೊಕದ್ದಮೆ ಸಂಖ್ಯೆ: 165/2011ರಲ್ಲಿ ಪ್ರಕರಣ ದಾಖಲಾಗಿದ್ದು, ನೀವು ಕರ್ತವ್ಯದಲ್ಲಿ ನಿರ್ಲಕ್ಷತನ, ಬೇಜವಾಬ್ದಾರಿತನ ಮತ್ತು ಮೇಲಾಧಿಕಾರಿಗಳ ಆದೇಶವನ್ನು ಪಾಲಿಸದೇ ಅಗೌರವ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಬೆಂಗಳೂರು ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 02.09.2011ರ ಆದೇಶದಲ್ಲಿ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಅನ್ವಯವಾಗದಂತೆ 06 ತಿಂಗಳು ಮುಂದೂಡುವ ದಂಡನೆಯನ್ನು ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 05.03.2012ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ದೂರುದಾರರ ಮಗಳಾದ ಕು॥ ಪ್ರಿಯಾಂಕರವರು ದಿನಾಂಕ 06.07.2011ರಂದೇ ಪತ್ತೆಯಾಗಿದ್ದು ಪೋಷಕರ ಸುಪರ್ದಿಗೆ ನೀಡಿರುತ್ತಾರೆ. ಹಾಗೂ ಅರ್ಜಿದಾರರು ದಿನಾಂಕ 30.08.2012ರಂದು ವಯೋ ನಿವೃತ್ತಿ ಹೊಂದಿದ್ದು, ಅನುಕಂಪದ ಆಧಾರದ ಮೇಲೆ ಶಿಕ್ಷೆ ತಗ್ಗಿಸುವ ಕುರಿತು ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಶಿಫಾರಸ್ಸು ಮಾಡಿರುತ್ತಾರೆ. ಈ ಎಲ್ಲಾ ಅಂಶಗಳ ಹಿನ್ನಲೆಯಲ್ಲಿ ಇವರ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 34 ಪೊಸಿಅ 2013 ಬೆಂಗಳೂರು, ದಿನಾಂಕ: 23.10.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್. ಮುನಿಮಾರಯ್ಯ, ಎ.ಎಸ್.ಐ., ಅತ್ತಿಬೆಲೆ ಪೊಲೀಸ್ ಠಾಣೆ, ಬೆಂಗಳೂರು ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ ಶಿಸ್ತು ಪ್ರಾಧಿಕಾರವು ದಿನಾಂಕ 02.09.2011ರ ಆದೇಶದಲ್ಲಿ ವಿಧಿಸಿರುವ ದಂಡನೆಗೆ ಬದಲಾಗಿ ಕರ್ನಾಟಕ ಪೊಲೀಸ್ (ಶಿಸ್ತು ನಡವಳಿ) ನಿಯಮಗಳ 23(1)(a)(i)ರನ್ವಯ "ವಾಗ್ದಂಡನೆ" (censure) ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.1106

SC.30

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಗುರು ಬಿ. ಮತ್ತೂರು, ಪಿ.ಐ., ಭಟ್ಕಳ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ ಡಿಇ:19(7):ಉವ:2008 ದಿನಾಂಕ 06.09.2008

2) ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ ಸಿಬಿ(8)110/2008–09 ದಿನಾಂಕ 03.06.2009

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 06.09.2009

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)110/2008–09 ದಿನಾಂಕ 20.03.2013

5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 83 ಸಿಎನ್‌ಎಸ್ 2013 ದಿನಾಂಕ: 27.09.2013

**ಪ್ರಸ್ತಾವನೆ:**

ಶ್ರೀ ಗುರು ಬಿ. ಮತ್ತೂರು, ಪಿ.ಐ., ಭಟ್ಕಳ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಹಿಂದೆ ಸವಣೂರು ಪೊಲೀಸ್ ಠಾಣೆಯ, ಹಾವೇರಿ ಜಿಲ್ಲೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ದುರ್ನಡತೆ, ಘೋರ ನಿರ್ಲಕ್ಷ್ಯತೆ ಹಾಗೂ ಅತೀವ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಆಪಾದಿತರಾದ ಶ್ರೀ ಗುರು ಬಿ. ಮತ್ತೂರು, ಪಿ.ಐ., ಡಿ.ಎಸ್.ಬಿ., ಬಾಗಲಕೋಟೆ ಜಿಲ್ಲೆ, ಈ ಮೊದಲು ಸವಣೂರು ಪೊಲೀಸ್ ಠಾಣೆ, ಹಾವೇರಿ ಜಿಲ್ಲೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾಗ 2008ರ ಮಾರ್ಚ್ 21–22 ರಂದು ಒಂದೇ ವೇಳೆಗೆ ಗುಡ್ ಫ್ರೈಡೇ ಮತ್ತು ಈದ್ ಮಿಲಾದ್, ಹೋಲಿ ಹಬ್ಬಗಳು ಬಂದಿದ್ದರಿಂದ ಆರಕ್ಷಾಧೀಕ್ಷಕರು, ಹಾವೇರಿ, ಇವರು ದಿ: 14.03.2008ರ ಮತ್ತು ಡಿ.ಎಸ್.ಪಿ. ಶಿಗ್ಗಾಂವಿ, ಉಪವಿಭಾಗ, ರವರು ದಿ:20.03.2008ರ ನಿಸ್ತಂತು ಸಂದೇಶದಲ್ಲಿ ಸದರಿ ಹಬ್ಬಗಳ ಆಚರಣೆಯ ಕಾಲಕ್ಕೆ ಯಾವುದೇ ಅಹಿತಕರ ಘಟನೆಗಳು ಜರುಗದಂತೆ ಮುಂಜಾಗ್ರತೆ ಕ್ರಮ ಕೈಗೊಳ್ಳಲು ಸೂಚಿಸಿರುತ್ತಾರೆ. ಸವಣೂರು ಠಾಣಾ ವ್ಯಾಪ್ತಿಯ ಕಾರಡಗಿ ಗ್ರಾಮವು ಅತೀ ಸೂಕ್ಷ್ಮ ಪ್ರದೇಶವೆಂದು ಗುರುತಿಸಲಾಗಿದ್ದರೂ ಸಹಿತ ನೀವು ಗುಪ್ತ ಮಾಹಿತಿ ಸಂಗ್ರಹಿಸಿ, ಕಾರಡಗಿ ಗ್ರಾಮದಲ್ಲಿ ಶಾಂತಿ ಸಭೆಯನ್ನು ನಡೆಸಿರುವುದಿಲ್ಲ. ಅಲ್ಲದೆ, ಸವಣೂರು ಆಸಾರ ಸಂತೆಯ ಕುರಿತು ವಿವಾದವಿರುವ ಬಗ್ಗೆ ನಿಮಗೆ ತಿಳಿದಿದ್ದರೂ ಸಹಿತ ಆಸಾರ ಸಂತೆಯ ಪರ ಹಾಗೂ ವಿರೋಧಿ ಗುಂಪುಗಳ ಶಾಂತಿ ಸಭೆಯ ಏರ್ಪಡಿಸುವಲ್ಲಿ, ಸೌಹಾರ್ದದ ವಾತಾವರಣ ಮೂಡಿಸಲು ಕ್ರಮಗಳನ್ನು ಕೈಗೊಳ್ಳದೆ ನಿಮ್ಮ ಜವಾಬ್ದಾರಿಯುತ ಹುದ್ದೆಯ ಕರ್ತವ್ಯಗಳಲ್ಲಿ ಅತೀವ ಬೇಜವಾಬ್ದಾರಿತನ ಹಾಗೂ ಘೋರ ನಿರ್ಲಕ್ಷ್ಯತನ ಎಸಗಿದ್ದು ಅಲ್ಲದೆ ಮೇಲಾಧಿಕಾರಿಗಳು ನೀಡಿದ ಆದೇಶಗಳನ್ನು ಉಲ್ಲಂಘಿಸಿ, ಘೋರ ದುರ್ನಡತೆ ಎಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 06.09.2008ರ ಆದೇಶದಲ್ಲಿ ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ (02) ಎರಡು ವರ್ಷಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 03.06.2009ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿದ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಪರಿಗಣಿಸಿ ಸದರಿಯವರು ಎಸಗಿರುವ ತಪ್ಪಿಗೆ ಶಿಕ್ಷೆಯು ಹೆಚ್ಚಾಗಿರುವುದರಿಂದ, ಇವರ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 164 ಪೊಸಿಅ 2009 ಬೆಂಗಳೂರು, ದಿನಾಂಕ: 22.10.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಗುರು ಬಿ. ಮತ್ತೂರು, ಪಿ.ಐ., ಭಟ್ಕಳ ಇವರ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ ಶಿಸ್ತು ಪ್ರಾಧಿಕಾರವು ದಿನಾಂಕ: 06.09.2008ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಮಾರ್ಪಡಿಸಿ ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ (01) ಒಂದು ವರ್ಷ ಅವಧಿಗೆ ಮುಂದೂಡುವ ದಂಡನೆಯನ್ನು ವಿಧಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.1108**

**SC.30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಕನಯ್ಯಲಾಲ್ ಡಿ. ತಿವಾರಿ, ಸಿಪಿಸಿ–1293, ಆಳಂದ ಪೊಲೀಸ್ ಠಾಣೆ, ಗುಲಬರ್ಗಾ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಗುಲಬರ್ಗಾ ಇವರ ಆದೇಶ ಸಂಖ್ಯೆ: ಇವಿ/8/2011 (ಡಿಒಬಿ ಸಂ./750/2011) ದಿನಾಂಕ 08.08.2011

2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲಬರ್ಗಾ ಇವರ ಆದೇಶ ಸಂಖ್ಯೆ ಅಪೀಲು/83/ಈವ/2011/934 (ಆ.ಪು.ಸಂ./311/ಈವ/2012) ದಿನಾಂಕ 30.06.2012

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 30.10.2012

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)54/2012–13 ದಿನಾಂಕ 28.03.2013

5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 84 ಸಿಎನ್‌ಎಸ್ 2013 ದಿನಾಂಕ: 27.09.2013

**ಪ್ರಸ್ತಾವನೆ:**

ಶ್ರೀ ಕನಯ್ಯಲಾಲ್ ಡಿ. ತಿವಾರಿ, ಸಿಪಿಸಿ–1293, ಆಳಂದ ಪೊಲೀಸ್ ಠಾಣೆ, ಗುಲಬರ್ಗಾ ಜಿಲ್ಲೆ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಬೇಜವಾಬ್ದಾರಿತನ ಹಾಗೂ ಅಶಿಸ್ತು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಡಿಸಲಾಗಿದೆ.

**ದೋಷಾರೋಪಣೆ:–**

"ದಿನಾಂಕ: 14.09.2009 ರಿಂದ ಇಲ್ಲಿಯವರೆಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಬೇಜವಾಬ್ದಾರಿತನ ಹಾಗೂ ಅಶಿಸ್ತು ಪ್ರದರ್ಶಿಸಿರುತ್ತೀರಿ"

ಮೇಲ್ಕಂಡ ಆರೋಪದ ಮೇಲೆ ನಡೆಸಲಾದ ಇಲಾಖಾ ವಿಚಾರಣೆಯಲ್ಲಿ ಇವರ ವಿರುದ್ಧದ ಆರೋಪವು ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯಪಟ್ಟಿದ್ದು ಅದರನ್ವಯ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಗುಲಬರ್ಗಾ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ 08.08.2011ರ ಆದೇಶದಲ್ಲಿ ಅರ್ಜಿದಾರರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಿ ಇವರು ಕರ್ತವ್ಯಕ್ಕೆ ಗೈರುಹಾಜರಾದ ಅವಧಿ ದಿನಾಂಕ 14.09.2009ರಿಂದ ಇಲ್ಲಿಯವರೆಗೆ ವೇತನ ರಹಿತ ರಜೆಯೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 30.06.2012ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ಆದೇಶವನ್ನು ಮಾರ್ಪಡಿಸಿ, ಅರ್ಜಿದಾರರನ್ನು ಪುನಃ ಸೇವೆಗೆ ತೆಗೆದುಕೊಳ್ಳುತ್ತಾ ಇವರ ವೇತನವನ್ನು ಪೇದೆಯ ಕನಿಷ್ಠ ವೇತನಕ್ಕೆ ಇಳಿಸಿ ಇವರು ಕರ್ತವ್ಯಕ್ಕೆ ಗೈರುಹಾಜರಾದ ಅವಧಿ ದಿನಾಂಕ 14.09.2009ರಿಂದ ಕರ್ತವ್ಯದಿಂದ ಹೊರಗುಳಿದ ಅವಧಿಯನ್ನು "Dies-Non" ಕರ್ತವ್ಯವಿಲ್ಲ–ಸಂಬಳವಿಲ್ಲ ಎಂದು ಪರಿಗಣಿಸಿ, ಇವರು ಕರ್ತವ್ಯಕ್ಕೆ ವರದಿ ಮಾಡಿದ ದಿನಾಂಕದಿಂದ ಇವರ ಸಂಬಳವು ಪ್ರಾರಂಭವಾಗುವುದೆಂದು ಆದೇಶಿಸಲಾಗಿದೆ.

ಈ ಎರಡೂ ಆದೇಶದ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರನ್ನು ಈಗಾಗಲೇ ಮಾನವೀಯ ದೃಷ್ಟಿಯಿಂದ ಸೇವೆಗೆ ಪುನರ್ ಸ್ಥಾಪಿಸಿದ್ದು, ಈ ದಂಡನೆಯನ್ನು ಮತ್ತಷ್ಟು ಕಡಿಮೆಗೊಳಿಸಲು ಸಮರ್ಥನೀಯ ಅಂಶಗಳು ಇರುವುದಿಲ್ಲ. ಆದರೆ ಕರ್ನಾಟಕ ನಾಗರಿಕ ಸೇವಾ ನಿಯಮಗಳು, ನಿಯಮ–59ರನ್ವಯ ಕಾಲಿಕ ವೇತನ ಶ್ರೇಣಿಯಲ್ಲಿ ವೇತನವನ್ನು ಕೆಳಗಿನ ಹಂತಕ್ಕೆ ಇಳಿಸುವ ದಂಡನೆ ವಿಧಿಸುವಾಗ ಅವಧಿಯನ್ನು ನಮೂದಿಸಿಸಬೇಕಾಗಿದ್ದು ಮೇಲ್ಮನವಿ ಪ್ರಾಧಿಕಾರವು ಸದರಿಯವರ ವೇತನವನ್ನು ಕನಿಷ್ಟ ವೇತನಕ್ಕೆ ಇಳಿಸಿದ್ದು ಎಷ್ಟು ಅವಧಿಯವರೆಗೆ ಎಂಬುದನ್ನು ನಮೂದಿಸಿರುವುದಿಲ್ಲ. ಈ ಅಂಶಗಳ ಹಿನ್ನಲೆಯಲ್ಲಿ ಅರ್ಜಿದಾರರ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ, ಈ ಕೆಳಗಿನಂತೆ ಪರಿಷ್ಕೃತ ದಂಡನೆಯನ್ನು ವಿಧಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 130 ಪೊಸಿಅ 2012 ಬೆಂಗಳೂರು, ದಿನಾಂಕ: 22.10.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕನಯ್ಯಲಾಲ್ ಡಿ. ತಿವಾರಿ, ಸಿಪಿಸಿ–1293, ಆಳಂದ ಪೊಲೀಸ್ ಠಾಣೆ, ಗುಲಬರ್ಗಾ ಜಿಲ್ಲೆ ಇವರಿಗೆ ವಿಧಿಸಿದ ದಂಡನೆಯನ್ನು ಈ ಕೆಳಕಂಡಂತೆ ಮಾರ್ಪಡಿಸಿ ಆದೇಶಿಸಿದೆ.

(i) ಶ್ರೀ ಕನಯ್ಯಲಾಲ್ ಡಿ. ತಿವಾರಿಯವರನ್ನು ಸೇವೆಗೆ ಪುನರ್ ಸ್ಥಾಪಿಸಿ, ಇವರ ವೇತನವನ್ನು ಪೇದೆ ಹುದ್ದೆಯ ಕನಿಷ್ಟ ವೇತನಕ್ಕೆ ಎರಡು ವರ್ಷಗಳ ಅವಧಿಗೆ ಸಂಚಿತ ಪರಿಣಾಮ ಬೀರುವಂತೆ (with cumulative effect) ಕೆಳಗಿಳಿಸುವ ದಂಡನೆಯನ್ನು ವಿಧಿಸಿದೆ.

(ii) ಪರಿಷ್ಕೃತ ದಂಡನೆಯು ಮೇಲ್ಮನವಿ ಪ್ರಾಧಿಕಾರಿಗಳು ಹೊರಡಿಸಿರುವ ದಂಡನೆ ಆದೇಶದ ದಿನಾಂಕ 30.06.2012ರಿಂದಲೇ ಜಾರಿಗೆ ಬರುತ್ತದೆ.

(iii) ಈ ದಂಡನೆಯ ಅವಧಿಯಲ್ಲಿ ಶ್ರೀಯುತರು ಯಾವುದೇ ವಾರ್ಷಿಕ ವೇತನ ಬಡ್ತಿಗಳಿಗೆ ಮತ್ತು ಪದೋನ್ನತಿಗೆ ಅರ್ಹರಿರುವುದಿಲ್ಲ.

(iv) ದಂಡನೆಯ ಅವಧಿ ಮುಕ್ತಾಯವಾದ ನಂತರ, ಇವರು ದಂಡನಾದೇಶದ ಹಿಂದಿನ ದಿನ ಯಾವ ವೇತನವನ್ನು ಪಡೆಯುತ್ತಿದ್ದರೋ ಅದೇ ವೇತನ ಶ್ರೇಣಿಯ ಅದೇ ವೇತನ ಹಂತಕ್ಕೆ ಇವರ ವೇತನವನ್ನು ಮರು ನಿಗದಿಗೊಳಿಸತಕ್ಕದ್ದು.

(v) ಇವರು ಕರ್ತವ್ಯಕ್ಕೆ ಗೈರುಹಾಜರಾದ ದಿನಾಂಕ 14.09.2009ರಿಂದ ಇವರು ಕರ್ತವ್ಯಕ್ಕೆ ಪುನಃ ವರದಿ ಮಾಡಿಕೊಂಡ ದಿನಾಂಕದವರೆಗೆ ಸೇವೆಯಿಂದ ಹೊರಗುಳಿದ ಅವಧಿಯನ್ನು ಲೆಕ್ಕಕ್ಕಿಲ್ಲದ ಅವಧಿ (Dies-Non) ಎಂದು ಪರಿಗಣಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.1109

SC.30

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಸ್.ಹೆಚ್. ಭಜಂತ್ರಿ, ಪಿಎಸ್ಐ (ಕಾ ಮತ್ತು ಸು), ಮಂಗಳೂರು ಪೂರ್ವ ವಿಭಾಗ, ಮಂಗಳೂರು ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಮಂಗಳೂರು ನಗರ ಇವರ ಆದೇಶ ಸಂಖ್ಯೆ ಶಿಕ್ಷಾಪಟ್ಟಿ/121/2012 ದಿನಾಂಕ 26.02.2013

2) ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಹಿಂಬರಹ ಸಂಖ್ಯೆ ಅಪೀಲು(4)/13/2013–14 ದಿನಾಂಕ 03.07.2013

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 11.07.2013

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)24/2013–14 ದಿನಾಂಕ 04.09.2013

**ಪ್ರಸ್ತಾವನೆ:**

ಶ್ರೀ ಎಸ್.ಹೆಚ್. ಭಜಂತ್ರಿ, ಪಿಎಸ್ಐ (ಕಾ ಮತ್ತು ಸು), ಮಂಗಳೂರು ಪೂರ್ವ ವಿಭಾಗ, ಮಂಗಳೂರು ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯಲೋಪ, ಅತೀವ ನಿರ್ಲಕ್ಷ್ಯತೆ, ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

> **"**ಶ್ರೀ ಎಸ್.ಹೆಚ್. ಭಜಂತ್ರಿ, ಪೊಲೀಸು ಉಪ ನಿರೀಕ್ಷಕರು ನೀವು ಮಂಗಳೂರು ಪೂರ್ವ ಪೊಲೀಸ್ ಠಾಣೆಯಲ್ಲಿ ಕರ್ತವ್ಯದಲ್ಲಿರುತ್ತೀರಿ. ಮಂಗಳೂರು ಪೂರ್ವ ಪೊಲೀಸು ಠಾಣಾ ಮೊ.ಸಂ. 165/2011 ಕಲಂ 405, 406, 407, 417, 420, 120 (ಬಿ) ಜೊತೆಗೆ 34 ಭಾದಂಸಂ ಹಾಗೂ ಮೊ.ಸಂ. 163/2011 405, 406, 407, 417, 420, 120 (ಬಿ) ಜೊತೆಗೆ 34 ಭಾದಂಸಂ ಪ್ರಕರಣಗಳ ತನಿಖೆಯನ್ನು ಸಮರ್ಪಕವಾಗಿ ನಡೆಸದೇ, ಸಾಕಷ್ಟು ಸಾಕ್ಷ್ಯಾಧಾರಗಳು ಇದ್ದರೂ ಸಹಾ ತನಿಖೆ ನಡೆಸದೇ ಸ್ಥಳದ ಪಂಚನಾಮ ಮಾಡದೇ ಫಿರ್ಯಾದುದಾರರಿಗೆ 4 ನೋಟಿಸ್ ನೀಡಿದ್ದರೂ ಪ್ರಕರಣಕ್ಕೆ ಸಂಬಂಧಿಸಿದ ಸಾಕ್ಷ್ಯಾಧಾರಗಳನ್ನು ಸಂಗ್ರಹಿಸದೇ ದಿನಾಂಕ: 27.12.2011ರಂದು ಸಾಕ್ಷ್ಯಾಧಾರಗಳ ಕೊರತೆಯಿಂದ ಕೂಡಿದ ಪ್ರಕರಣಗಳೆಂದು ತನಿಖೆಯನ್ನು ಮುಕ್ತಾಯಗೊಳಿಸಿ **"ಬಿ"** ಅಂತಿಮ ವರದಿಗಳನ್ನು ತಯಾರಿಸಿ ನ್ಯಾಯಲಯಕ್ಕೆ ಮೇಲಾಧಿಕಾರಿಯವರ ಮುಖಾಂತರ ಸಲ್ಲಿಸದೇ ನೇರವಾಗಿ ಸಲ್ಲಿಸಿ ತೀವ್ರ ಕರ್ತವ್ಯ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿ ಪ್ರದರ್ಶಿಸಿ ಕರ್ತವ್ಯಲೋಪವೆಸಗಿರುವುದು ಪೊಲೀಸ್ ನಿರೀಕ್ಷಕರು ಮಂಗಳೂರು ಪೂರ್ವ ಪೊಲೀಸ್ ಠಾಣೆ ಇವರ ವರದಿಯಲ್ಲಿ ಗಮನಕ್ಕೆ ಬಂದಿರುವುದರಿಂದ ನಿಮ್ಮ ವಿರುದ್ಧ ಈ ಮೇಲಿನ ಆರೋಪಣೆಯನ್ನು ಹೊರಡಿಸಲಾಗಿದೆ**"**

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಮಂಗಳೂರು ನಗರ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 26.02.2013ರ ಆದೇಶದಲ್ಲಿ ಅರ್ಜಿದಾರರ ಮುಂಬರುವ ವಾರ್ಷಿಕ ವೇತನ ಬಡ್ತಿಯನ್ನು ತದನಂತರ ಗಳಿಸುವ ವೇತನ ಬಡ್ತಿಗಳಿಗೆ ಬಾಧಕವಾಗದಂತೆ 6 ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 03.07.2013ರ ಹಿಂಬರಹದಲ್ಲಿ ಕಾಲವಿಳಂಬವಾಗಿ ಮೇಲ್ಮನವಿ ಸಲ್ಲಿಸಿದ ಕಾರಣ ಮೇಲ್ಮನವಿಯನ್ನು ಪರಿಗಣಿಸಲು ನಿಯಮಗಳಲ್ಲಿ ಆಸ್ಪದವಿಲ್ಲವೆಂದು ತಿಳಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯಲೋಪ, ಅತೀವ ನಿರ್ಲಕ್ಷ್ಯತೆ, ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 89 ಪೊಸಿಅ 2013 ಬೆಂಗಳೂರು, ದಿನಾಂಕ: 05.11.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಹೆಚ್. ಭಜಂತ್ರಿ, ಪಿಎಸ್ಐ (ಕಾ ಮತ್ತು ಸು), ಮಂಗಳೂರು ಪೂರ್ವ ವಿಭಾಗ, ಮಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.1114**

**SC.30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಜಿ.ಎನ್. ನರಹರಿ, ಅನುಯಾಯಿ, ಎಟಿಪಿಎಸ್, ಯಲಹಂಕ, ಬೆಂಗಳೂರು ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಸೂಪರಿಂಟೆಂಡ್ ಆಫ್ ಪೊಲೀಸ್ ಮತ್ತು ಪ್ರಾಂಶುಪಾಲರು, ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಯಲಹಂಕ, ಬೆಂಗಳೂರು ಇವರ ಆದೇಶ ಸಂಖ್ಯೆ: ಸಪೊತಶಾ/ಸಿಬ್ಬಂದಿ–1/ಇ.ವಿ.–1/2009–10 ದಿನಾಂಕ 18.04.2011
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಉಪ ಮಹಾ ನಿರೀಕ್ಷಕರು, ತರಬೇತಿ, ಬೆಂಗಳೂರು ಇವರ ಆದೇಶ ಸಂಖ್ಯೆ ತ–1/ಸಿಬ್ಬಂದಿ/ಅಪೀಲು–16/2011 (ಓ.ಬಿ.ಸಂಖ್ಯೆ: 21/2011) ದಿನಾಂಕ 03.08.2011
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 16.08.2011
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)36/2011–12 ದಿನಾಂಕ: 20.12.2011

**ಪ್ರಸ್ತಾವನೆ:**

ಶ್ರೀ ಜಿ.ಎನ್. ನರಹರಿ, ಅನುಯಾಯಿ, ಎಟಿಪಿಎಸ್, ಯಲಹಂಕ, ಬೆಂಗಳೂರು ಇವರು ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ತಮ್ಮ ಪತ್ನಿಗೆ ಮಾನಸಿಕ, ದೈಹಿಕ, ಲೈಂಗಿಕ ಹಿಂಸೆ ಹಾಗೂ ವರದಕ್ಷಿಣೆ ನೀಡುವಂತೆ ಕಿರುಕುಳ ನೀಡಿ ತಮ್ಮ ಕರ್ತವ್ಯದಲ್ಲಿ ಕರ್ತವ್ಯ ಲೋಪ, ದುರ್ನಡತೆ, ಬೇಜವಾಬ್ದಾರಿ ಹಾಗೂ ನಿರ್ಲಕ್ಷತೆಯನ್ನು ತೋರಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957 ಹಾಗೂ 2004ರ ನಿಯಮ 11ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಜಿ.ಎನ್. ನರಹರಿ, ಅನುಯಾಯಿ, ಎಟಿಪಿಎಸ್, ಯಲಹಂಕ ಆದ ನೀವು ಸರ್ಕಾರಿ ನೌಕರರಾಗಿದ್ದು, ನಿಮ್ಮ ಸಂಸಾರದಲ್ಲಿ ಪತ್ನಿಯಾದ ಶ್ರೀಮತಿ ಪೂರ್ಣಿಮಾರವರಿಗೆ ಮಾನಸಿಕ, ದೈಹಿಕ, ಲೈಂಗಿಕ ಹಾಗೂ ವರದಕ್ಷಿಣೆ ನೀಡುವಂತೆ ಕಿರುಕುಳ ನೀಡಿ ದಿನಾಂಕ 09.11.2008ರಂದು ರಾತ್ರಿ 03.30 ಗಂಟೆಯಲ್ಲಿ ಮನೆಯಿಂದ ಹೊರಕ್ಕೆ ಹಾಕಿರುವ ಆರೋಪ.

ನಿಮ್ಮ ಪತ್ನಿ ಶ್ರೀಮತಿ ಪೂರ್ಣಿಮಾರವರ ತಾಯಿಯವರಿಂದ ಖಾಲಿ ಬಾಂಡ್ ಪೇಪರ್‌ಗಳಲ್ಲಿ ಮತ್ತು ಹೆಚ್.ಡಿ.ಎಫ್.ಸಿ. ಬ್ಯಾಂಕಿನ ಖಾಲಿ ಚೆಕ್‌ಗಳ ಮೇಲೆ ಸಹಿ ಮಾಡಿಸಿಕೊಂಡಿದ್ದು ನಂತರ ಸದರಿಯವರ ಪತ್ನಿಯವರ ತಾಯಿಯವರನ್ನು ಬಲತ್ಕಾರದಿಂದ ಗೂಂಡಾಗಳ ಸಹಾಯದಿಂದ ಮೈಸೂರು ಸಬ್ ರಿಜಿಸ್ಟ್ರಾರ್ ಕಛೇರಿಗೆ ಕರೆದುಕೊಂಡು ಹೋಗಿ 20 ಲಕ್ಷ ಬೆಲೆ ಬಾಳುವ ಮನೆಯನ್ನು 4,27,000–00ಕ್ಕೆ ನಿಮ್ಮ ಸ್ನೇಹಿತ ಚಂದ್ರಕಾಂತ್ ಎಂಬುವವರಿಗೆ ಕೊಡಿಸಿ ಮೋಸ ಮಾಡಿರುತ್ತೀರಿ ಎಂಬ ಆರೋಪ. ಇದು ನಿಮ್ಮ ಕರ್ತವ್ಯ ಲೋಪ, ದುರ್ನಡತೆ, ಬೇಜವಾಬ್ದಾರಿ ಹಾಗೂ ನಿರ್ಲಕ್ಷತೆಯನ್ನು ಪ್ರದರ್ಶಿಸುತ್ತದೆ."

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಸೂಪರಿಂಟೆಂಡ್ ಆಫ್ ಪೊಲೀಸ್ ಮತ್ತು ಪ್ರಾಂಶುಪಾಲರು, ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಯಲಹಂಕ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 18.04.2011ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಮೂರು ವಾರ್ಷಿಕ ವೇತನ ಬಡ್ತಿಗಳನ್ನು ತಡೆ ಹಿಡಿದು, ಇದು ಅವರ ಸೇವಾ ಅವಧಿಯಲ್ಲಿ ಮುಂದಿನ ವಾರ್ಷಿಕ ಬಡ್ತಿಗಳಿಗೆ ಧಕ್ಕೆಯಾಗುವಂತೆ ಆದೇಶಿಸಿ ಇವರ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಲಾದ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಉಪ ಮಹಾ ನಿರೀಕ್ಷಕರು, ತರಬೇತಿ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 03.08.2011ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಗಳನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಗಳಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಗಳಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ತಮ್ಮ ಪತ್ನಿಗೆ ಮಾನಸಿಕ, ದೈಹಿಕ, ಲೈಂಗಿಕ ಹಿಂಸೆ ಹಾಗೂ ವರದಕ್ಷಿಣೆ ನೀಡುವಂತೆ ಕಿರುಕುಳ ನೀಡಿ ತಮ್ಮ ಕರ್ತವ್ಯದಲ್ಲಿ ಕರ್ತವ್ಯ ಲೋಪ, ದುರ್ನಡತೆ, ಬೇಜವಾಬ್ದಾರಿ ಹಾಗೂ ನಿರ್ಲಕ್ಷತೆಯನ್ನು ತೋರಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 143 ಪೊಸಿಅ 2013 ಬೆಂಗಳೂರು, ದಿನಾಂಕ: 05.11.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 26ರಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ.ಎನ್. ನರಹರಿ, ಅನುಯಾಯಿ, ಎಟಿಪಿಎಸ್, ಯಲಹಂಕ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಗಳನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.1115

SC.30

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ॥ ವೆಂಕಟೇಶ್ .ವಿ, ವೈದ್ಯಾಧಿಕಾರಿಗಳು, ಇವರನ್ನು ಸ್ನಾತಕೋತ್ತರ ಪದವಿ ವ್ಯಾಸಂಗಕ್ಕಾಗಿ ನಿಯೋಜಿಸುವ ಬಗ್ಗೆ.

**ಓದಲಾಗಿದೆ:** ಆಯುಷ್ ನಿರ್ದೇಶಕರ ಪತ್ರ ಸಂಖ್ಯೆ: ಆಯುಷ್/32/ಸಿ(4)/2013–14 ದಿನಾಂಕ: 15–10–2013.

**ಪ್ರಸ್ತಾವನೆ:**

ಆಯುಷ್ ನಿರ್ದೇಶಕರು, ಮೇಲೆ ಓದಲಾದ ಪತ್ರದಲ್ಲಿ ಡಾ॥ ವೆಂಕಟೇಶ್. ವಿ. ವೈದ್ಯಾಧಿಕಾರಿಗಳು, ಸರ್ಕಾರಿ ಯುನಾನಿ ಚಿಕಿತ್ಸಾಲಯ, ಚನ್ನಪಟ್ಟಣ, ರಾಮನಗರ ಜಿಲ್ಲೆ, ಇವರು "Tahafuzi-O-Samaji Tibb" ಎಂಬ ವಿಷಯದ ತಜ್ಞತೆಯಲ್ಲಿ 2013–14ನೇ ಶೈಕ್ಷಣಿಕ ಸಾಲಿನಲ್ಲಿ ಸ್ನಾತಕೋತ್ತರ ಪದವಿ ಕೋರ್ಸ್‌ಗೆ ಕೇಂದ್ರ ಸರ್ಕಾರದಿಂದ ನಾಮನಿರ್ದೇಶನಗೊಂಡಿದ್ದು, ಸದರಿಯವರನ್ನು ರಾಷ್ಟ್ರೀಯ ಯುನಾನಿ ಸಂಸ್ಥೆ, ಬೆಂಗಳೂರು ಇಲ್ಲಿಗೆ ಉನ್ನತ ವ್ಯಾಸಂಗಕ್ಕೆ ನಿಯೋಜಿಸುವಂತೆ ಶಿಫಾರಸ್ಸು ಮಾಡಿದ್ದಾರೆ. ಮುಂದುವರೆದು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 61ರ ಅಪೆಂಡಿಕ್ಸ್ 2 ಎ(1)ರನ್ವಯ ನಿಗಧಿಪಡಿಸಿದ ಷರತ್ತು ಮತ್ತು ನಿಬಂಧನೆಗಳನ್ನು ಪೂರೈಸಿದ್ದು, ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆಯು ಬಾಕಿ ಇರುವುದಿಲ್ಲ ಹಾಗೂ ಇವರ ಸೇವೆಯು ತೃಪ್ತಿಕರವಾಗಿದೆ ಎಂದು ತಿಳಿಸುತ್ತಾ, ಸದರಿ ವೈದ್ಯರನ್ನು 03 ವರ್ಷಗಳ ಅವಧಿಯ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಲು ಸರ್ಕಾರದ ಮಂಜೂರಾತಿ ನೀಡುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 422 ಪಿಐಎಂ 2013, ಬೆಂಗಳೂರು, ದಿನಾಂಕ: 22–10–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ॥ ವೆಂಕಟೇಶ್ .ವಿ, ವೈದ್ಯಾಧಿಕಾರಿಗಳು, ಸರ್ಕಾರಿ ಯುನಾನಿ ಚಿಕಿತ್ಸಾಲಯ, ಚನ್ನಪಟ್ಟಣ, ರಾಮನಗರ ಜಿಲ್ಲೆ, ಇವರನ್ನು ಸ್ನಾತಕೋತ್ತರ ಪದವಿ ವ್ಯಾಸಂಗಕ್ಕಾಗಿ ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: No.R12013/2/2013–E&C/(PG-U) ದಿನಾಂಕ: 10.10.2013ರಂದು ನಾಮ ನಿರ್ದೇಶನ ಮಾಡಿರುವ ಹಿನ್ನೆಲೆಯಲ್ಲಿ 2013–14ನೇ ಸಾಲಿನ ಶೈಕ್ಷಣಿಕ ವರ್ಷದಿಂದ ಜಾರಿಗೆ ಬರುವಂತೆ "Tahafuzi-O-Samaji Tibb" ಎಂಬ ವಿಷಯದ ತಜ್ಞತೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 61ರ ಅಪೆಂಡಿಕ್ಸ್ 2 ಎ(1)ರನ್ವಯ ಸೂಚಿಸಿರುವ ಷರತ್ತುಗಳು ಹಾಗೂ ಅವರ ವೇತನವನ್ನು ಸರ್ಕಾರಿ ಯುನಾನಿ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ಇಲ್ಲಿ ಪಡೆಯುವುದರೊಂದಿಗೆ 03 ವರ್ಷಗಳ ಅವಧಿಯ ಸ್ನಾತಕೋತ್ತರ ಪದವಿ ವ್ಯಾಸಂಗಕ್ಕಾಗಿ National Institute of Unani Medicine, Bangalore ಇಲ್ಲಿಗೆ ನಿಯೋಜಿಸಲು ಸರ್ಕಾರದ ಮಂಜೂರಾತಿ ನೀಡಿದೆ.

1. ಅವರ ಹುದ್ದೆಯ ಮೇಲಿನ ಹಕ್ಕನ್ನು ಮುಂದುವರೆಸುವುದು.
2. ಅವರ ವಿದ್ಯಾಭ್ಯಾಸದ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 8(15)(ಸಿ) ರೀತ್ಯಾ ಕೆಲಸದ ಮೇಲಿದ್ದ ಅವಧಿ ಎಂದು ಪರಿಗಣಿಸುವುದು.
3. ನಿಯೋಜನೆಯ ಅವಧಿಯಲ್ಲಿ ಅವರು ಪಡೆಯುತ್ತಿರುವ ವೇತನ ಭತ್ಯೆಗಳನ್ನು ಹಾಗೂ ಕಾಲಕಾಲಕ್ಕೆ ಲಭ್ಯವಾಗುವ ವೇತನ ಬಡ್ತಿಗಳು ಸೇರಿದಂತೆ ಯಥಾವತ್ತಾಗಿ (ಲಭ್ಯವಾಗುವಂತೆ)ಮುಂದುವರೆಸುವುದು.
4. ಕೆ.ಸಿ.ಎಸ್.ಆರ್.ನಿಯಮಾವಳಿಗಳ ನಮೂನೆ 19ರಲ್ಲಿ ಸ್ಟಾಂಪ್ ಪೇಪರ್‌ನಲ್ಲಿ ಒಪ್ಪಿಗೆ ಪತ್ರವನ್ನು ಪಡೆಯುವುದು ಹಾಗೂ ಸ್ನಾತಕೋತ್ತರ ವ್ಯಾಸಂಗ ಮುಗಿದ ನಂತರ ಇಲಾಖೆಯಲ್ಲಿ 10 ವರ್ಷಗಳ ಸೇವೆಯನ್ನು ಕಡ್ಡಾಯವಾಗಿ ಸಲ್ಲಿಸತಕ್ಕದ್ದು, ಒಪ್ಪಿಗೆ ಪತ್ರದಲ್ಲಿ ನಿಯಮಾನುಸಾರ ಎಲ್ಲಾ ಷರತ್ತುಗಳನ್ನು ನಮೂದಿಸುವುದು.
5. ವ್ಯಾಸಂಗಕ್ಕಾಗಿ ಸೇರುವ ಕೇಂದ್ರ ಸ್ಥಾನದಿಂದ ವ್ಯಾಸಂಗದ ಸ್ಥಳಕ್ಕೆ ಮೊದಲ ಬಾರಿಗೆ ಹೋಗಲು ಮತ್ತು ವ್ಯಾಸಂಗದ ಅವಧಿ ಮುಗಿದ ನಂತರ ವಾಪಸ್ಸು ಬರಲು ಪ್ರವಾಸದ ಮೇಲಿದ್ದಂತೆ ಪ್ರಯಾಣ ಭತ್ಯೆ ನೀಡುವುದು.
6. ಉನ್ನತ ಶಿಕ್ಷಣಕ್ಕೆ ಪ್ರತಿ ನಿಯೋಜಿಸಲ್ಪಡುವ ವೈದ್ಯರುಗಳು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ಅಡಿಯಲ್ಲಿ ತಿಳಿಸಿರುವ ಸವಲತ್ತುಗಳನ್ನು ಮಾತ್ರವೇ ಪಡೆಯುವುದು.
7. ಕರ್ನಾಟಕ ನಾಗರೀಕ ಸೇವಾ ನಿಯಮಗಳಲ್ಲಿ ನಿಯೋಜನೆಗೆ ವಿಧಿಸಿರುವ ಎಲ್ಲಾ ಷರತ್ತುಗಳನ್ನು ಪ್ರತಿ ನಿಯೋಜನೆಯಿಂದ ವ್ಯಾಸಂಗ ಪೂರೈಸಿದ ತರುವಾಯ ಪೂರೈಸುವುದು.
8. ವ್ಯಾಸಂಗದ ಸ್ಥಳದಲ್ಲಿ ದಿನಭತ್ಯೆ ಒಂದರ ಅರ್ಧದಷ್ಟು ಶಿಷ್ಯವೇತನ ನೀಡುವುದು.
9. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ಅಪೆಂಡಿಕ್ಸ್–1 'ಎ' ನಿಯಮ 1ರ ಉಪನಿಯಮ 8(ಡಿ) ರನ್ವಯ ವ್ಯಾಸಂಗ ಶುಲ್ಕವನ್ನು ಪಡೆಯಲು ಅರ್ಹರಿರುತ್ತಾರೆ.
10. ವ್ಯಾಸಂಗವನ್ನು ಪೂರ್ಣಗೊಳಿಸದೇ ಇದ್ದಲ್ಲಿ, ಸದರಿ ನಿಯೋಜನೆಗೆ ತಗುಲಿರುವ ಪೂರ್ಣ ವೆಚ್ಚವನ್ನು ಸರ್ಕಾರಕ್ಕೆ ಹಿಂದಿರುಗಿಸುವುದು.

ಸದರಿ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಆಇ 2 ಎಸ್.ಆರ್.ಎ. 2008, ದಿನಾಂಕ: 05.06.2008ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎನ್.ಹರಿಣಿಯಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,

(ಭಾರತೀಯ ವೈದ್ಯಪದ್ದತಿ ಮತ್ತು ಸಮನ್ವಯ)

PR.1095

## ಇಂಧನ ಸಚಿವಾಲಯ

**ವಿಷಯ :** ಮೆ॥ ಸುಜ್ಲಾನ್ ಎನರ್ಜಿ ಲಿಮಿಟೆಡ್ ರವರಿಗೆ ಹಂಚಿಕೆಯಾಗಿರುವ 26.00 ಮೆ.ವ್ಯಾ. ಪವನ ವಿದ್ಯುತ್ ಯೋಜನಾ ಸಾಮರ್ಥ್ಯದಲ್ಲಿ 14.75 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಡಿಇ 98 ಎನ್‌ಸಿಇ 2000, ದಿನಾಂಕ : 10–07–2000.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/SEL-14.75 MW/2012/1484, ದಿನಾಂಕ : 25/26–05–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಮೆ॥ ಸುಜ್ಲಾನ್ ಎನರ್ಜಿ ಲಿಮಿಟೆಡ್ ರವರಿಗೆ ಈ ಕೆಳಕಂಡಂತೆ 98 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯು ಹಂಚಿಕೆಯಾಗಿತ್ತು.

| District | Location | MW |
|---|---|---|
| Belgaum | Chikkodi | 19 |
| | Hanumanahatti | 26 |
| Bellary | Sogi (South) | 9 |
| | Gujanur | 3 |
| Hassan | Haradanahalli | 23 |
| Chitradurga | Jogimatti-1 | 18 |
| **Total** | | **98** |

ಮೆ॥ ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಬೆಳಗಾವಿ ಜಿಲ್ಲೆಯ ಹುನುಮನಹಟ್ಟಿ ಪ್ರದೇಶದಲ್ಲಿ ಮೇಲ್ಕಂಡಂತೆ ಹಂಚಿಕೆಯಾಗಿರುವ 26.00 ಮೆ.ವ್ಯಾ. ಪವನ ವಿದ್ಯುತ್ ಸಾಮರ್ಥ್ಯದಲ್ಲಿ ಬಂಬಾಗಿ ಗ್ರಾಮದಲ್ಲಿ ಬರುವ 14.75 ಮೆ.ವ್ಯಾ. ಸಾಮರ್ಥ್ಯದ ಯೋಜನಾ ಸ್ಥಳವು ಬೆಳಗಾವಿ ವಿಮಾನ ನಿಲ್ದಾಣದ ಸಮೀಪದಲ್ಲಿ ಬರುವುದರಿಂದ ಅನುಷ್ಠಾನಗೊಳಿಸಲು ಕಾರ್ಯಸಾಧುವಲ್ಲವಾದ ಕಾರಣ ಯೋಜನೆಯನ್ನು ಅಭಿವೃದ್ಧಿದಾರರು ಸರ್ಕಾರಕ್ಕೆ ಅಧ್ಯರ್ಪಿಸಲು ಸಿದ್ಧರಿರುವುದಾಗಿ ತಿಳಿಸಿರುವುದರಿಂದ, ಸದರಿಯವರ ಕೋರಿಕೆಯನ್ನು ಪರಿಗಣಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 172 ಎನ್‌ಸಿಇ 2011, ಬೆಂಗಳೂರು, ದಿನಾಂಕ : 17–07–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ : ಡಿಇ 98 ಎನ್‌ಸಿಇ 2000, ದಿನಾಂಕ : 10–07–2000ರಲ್ಲಿ ಮೆ॥ ಸುಜ್ಲಾನ್ ಎನರ್ಜಿ ಲಿಮಿಟೆಡ್ ರವರಿಗೆ ಬೆಳಗಾವಿ ಜಿಲ್ಲೆಯ ಹನುಮನಹಟ್ಟಿ ಪ್ರದೇಶದಲ್ಲಿ ಹಂಚಿಕೆಯಾಗಿರುವ 26.00 ಮೆ.ವ್ಯಾ. ಪವನ ವಿದ್ಯುತ್ ಯೋಜನೆಯಲ್ಲಿ ಬಂಬಾಗಿ ಗ್ರಾಮದಲ್ಲಿ ಬರುವ 14.75 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಸಂಬಂಧಿಸಿದ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**PR. 960**
**SC-25**

## ಇಂಧನ ಸಚಿವಾಲಯ

**ವಿಷಯ :** ಮೆ॥ ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಂಚಿಕೆಯಾಗಿರುವ 204 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 16 ಮೆ.ವ್ಯಾ. ಸಾಮರ್ಥ್ಯವನ್ನು ಮೆ॥ ರಿನೀವ್ ವಿಂಡ್ ಎನರ್ಜಿ (ಕರ್ನಾಟಕ) ಪ್ರೈವೇಟ್ ಲಿಮಿಟೆಡ್ ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 42 ಎನ್‌ಸಿಇ 2006, ದಿನಾಂಕ : 20–04–2006.
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 462 ಎನ್‌ಸಿಇ 2006, ದಿನಾಂಕ : 19–12–2006.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 322 ಎನ್‌ಸಿಇ 2011, ದಿನಾಂಕ : 28–10–2011.
4. ಸರ್ಕಾರಿ ಆದೇಶ ಸಂಖ್ಯೆ : ಇಎನ್ 250 ಎನ್‌ಸಿಇ 2012, ದಿನಾಂಕ : 28–10–2012.
5. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/08/RWEKPL-16 MW (VWILLP-204 MW) 2012/3354, ದಿನಾಂಕ : 10/11–12–2012 ಮತ್ತು ಕೆಆರ್‌ಇಡಿ/08/RWEKPL-16 MW (VWILLP-204 MW) 2013/151, ದಿನಾಂಕ : 17/18–01–2013.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ॥ Logaer Machines (I) Ltd. ಕಂಪನಿಗೆ ಧಾರವಾಡ ಮತ್ತು ಹಾವೇರಿ ಜಿಲ್ಲೆಗಳಲ್ಲಿ 150.66 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ॥ Logaer Machines (I) Ltd. ಕಂಪನಿಯ ಹೆಸರನ್ನು ಮೆ॥ ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಎಂದು ಬದಲಾಯಿಸಲು ಹಾಗೂ ಮೆ॥ Logaer Machines (I) Ltd. ರವರಿಗೆ ಹಂಚಿಕೆಯಾಗಿರುವ ಎಲ್ಲಾ ಪವನ ವಿದ್ಯುತ್ ಯೋಜನೆಗಳನ್ನು ಮೆ॥ ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಇವರಿಗೆ ವರ್ಗಾಯಿಸಲು ಅನುಮೋದನೆ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ॥ ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್ಎಲ್ಪಿ. ಕಂಪನಿಗೆ ಮಂಜೂರಾಗಿದ್ದ 150.66 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅಂಶಿಕ ಸಾಮರ್ಥ್ಯವಾದ 69.63 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 200 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ॥ ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್ಎಲ್ಪಿ, ಕಂಪನಿಗೆ ಮಂಜೂರಾಗಿದ್ದ 200 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 204 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಈ ಕೆಳಕಂಡ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹೆಚ್ಚಿಸಿ ಆದೇಶಿಸಲಾಗಿತ್ತು.

| Capacity in MW | Discription of area |
|---|---|
| 79.20 | A Large plain area spread around the village of Timmapura, Kabnur, Ingalagi, Ramapura in Haveri and Dharwad District and it also consists of plains with higher elevations and has two main peaks. The proposed area is held by the following Geographical co-oridinates :-<br>Latitude : $15^0$1'55"-$15^0$8'0" N<br>Longitude : $75^0$08'56"-$75^0$14'23" E<br>Ridge peaks : 701, 714, 682, 717, 713, 698, 733 722m AMSL. |
| 124.80 | A very vast area encompasses high plains and small ridges spread around the villages Kongapura, Sisvinhal, Shanlipur, Huvinsigli, Sigli, Gudgeri and Ramgeri. A railway track runs into this area. This area has moderate evelations varying from 580 to 680 Mtrs. at also consists of several peaks. The main places of this areas are Halgur, Gudgeri, Lakshmeshwar, Sigli, Karadgi, Nelgudda etc and the area is covered in the following Geographical co-oridinates :-<br>Latitude : $15^0$0'0"-$15^0$10'30" N<br>Longitude : $75^0$15'0"-$75^0$28'19" E<br>Ridge peaks : 681, 671, 676, 638, 624, 698, 664, 611, 644, 701, 720, 663, 682, 664, 708, 665, 664m AMSL. |
| 204 MW | |

ಮೇಲೆ ಓದಲಾದ (5)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್ಎಲ್ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 204 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 16 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ॥ ರಿನೀವ್ ವಿಂಡ್ ಎನರ್ಜಿ (ಕರ್ನಾಟಕ) ಪ್ರೈವೇಟ್ ಲಿಮಿಟೆಡ್, ರವರಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ ಹಾಗೂ ಮಂಜೂರಾಗಿರುವ ಒಟ್ಟು 204 ಮೆ.ವ್ಯಾ. ಸಾಮರ್ಥ್ಯದಲ್ಲಿ 98.40 ಮೆ.ವ್ಯಾ. ಸಾಮರ್ಥ್ಯವನ್ನು ಈಗಾಗಲೇ ವಿವಿಧ ಹೂಡಿಕೆದಾರರಿಗೆ ವರ್ಗಾಯಿಸಿ ಯೋಜನೆಯನ್ನು ಅನುಷ್ಠಾನಗೊಳಿಸಿರುವುದಾಗಿ ತಿಳಿಸಿರುತ್ತಾರೆ, ಹಾಗೂ ಪ್ರಸ್ತುತ ಸದರಿ ಯೋಜನೆಗೆ ಅವಶ್ಯಕವಾದ ಭೂಮಿಯು ಖಾಸಗಿ ಜಮೀನಾಗಿದ್ದು, ಈ ಯೋಜನೆಯನ್ನು ಆದೇಶ ಹೊರಡಿಸಿದ ದಿನಾಂಕದಿಂದ 10 ತಿಂಗಳೊಳಗಾಗಿ ಅನುಷ್ಠಾನಗೊಳಿಸಲಾಗುವುದು ಹಾಗೂ ಉತ್ಪಾದನೆ ಆಗುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮುಖಾಂತರ 3ನೇ ವ್ಯಕ್ತಿಗೆ ಮಾರಾಟ ಮಾಡುವುದು ಮತ್ತು ಸ್ವಂತಕ್ಕೆ ಬಳಕೆಗಾಗಿ ಉಪಯೋಗಿಸಿಕೊಳ್ಳಲಾಗುವುದೆಂದು ವರದಿ ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 376 ಎನ್‌ಸಿಇ 2012, ಬೆಂಗಳೂರು, ದಿನಾಂಕ : 22–01–2013**

ಮೆ॥ ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್ಎಲ್ಪಿ. ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 204 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ ಬಾಕಿ ಇರುವ ಸಾಮರ್ಥ್ಯದಿಂದ 16 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ. ರಿನೀವ್ ವಿಂಡ್ ಎನರ್ಜಿ (ಕರ್ನಾಟಕ) ಪ್ರೈವೇಟ್ ಲಿಮಿಟೆಡ್ ರವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು ವರ್ಗಾಯಿಸಲಾಗಿದೆ :–

**SHEDULE**

| Sl. No. | Village Name | Taluk/ District | MW | Land Survey number | WTG's No. | Extent of Land per WTG (Acres) | Latitude, Longitude and Ridge peaks |
|---|---|---|---|---|---|---|---|
| 1. | Devanur | Kundgol/ Dharwad | 0.800 | 182 | 212 | 1.10 | Lat. $15^0$8'29.87" N Long : $75^0$16'40.50" E |
| 2. | Devanur | Kundgol/ Dharwad | 0.800 | 169/1 | 206 | 1.07 | Lat. $15^0$8'0.91" N Long : $75^0$16'10.18" E |
| 3. | Devanur | Kundgol/ Dharwad | 0.800 | 169/2B | 207 | 1.04 | Lat. $15^0$8'9.80" N Long : $75^0$16'7.31" E |
| 4. | Devanur | Kundgol/ Dharwad | 0.800 | 169/4 | 208 | 1.12 | Lat. $15^0$8'18.50" N Long : $75^0$16'4.26" E |
| 5. | Devanur | Kundgol/ Dharwad | 0.800 | 168/1 | 209 | 1.07 | Lat. $15^0$8'26.89" N Long : $75^0$16'15.50" E |
| 6. | Bukoppa | Kundgol/ Dharwad | 0.800 | 67 | 201 | 1.10 | Lat. $15^0$9'5.46" N Long : $75^0$16'1.40" E |
| 7. | Bukoppa | Kundgol/ Dharwad | 0.800 | 37 | 198 | 1.10 | Lat. $15^0$8'21.56" N Long : $75^0$15'37.89" E |
| 8. | Kamadoli | Kundgol/ Dharwad | 0.800 | 212 | 204 | 1.10 | Lat. $15^0$8'32.43" N Long : $75^0$15'48.65" E |
| 9. | Kamadoli | Kundgol/ Dharwad | 0.800 | 196/3 | 203 | 1.10 | Lat. $15^0$8'43.31" N Long : $75^0$15'54.46" E |
| 10. | Kamadoli | Kundgol/ Dharwad | 0.800 | 205 | 196 | 1.10 | Lat. $15^0$8'3.42" N Long : $75^0$15'36.37" E |
| 11. | Kamadoli | Kundgol/ Dharwad | 0.800 | 207/3B | 213 | 1.10 | Lat. $15^0$8'17.24" N Long : $75^0$16'37" E |
| 12. | Kamadoli | Kundgol/ Dharwad | 0.800 | 202 | 215 | 1.10 | Lat. $15^0$8'14.68" N Long : $75^0$16'59.68" E |
| 13. | Kamadoli | Kundgol/ Dharwad | 0.800 | 199 | 214 | 1.10 | Lat. $15^0$8'22.88" N Long : $75^0$16'55.53" E |
| 14. | Komadoli | Kundgol/ Dharwad | 0.800 | 212/1 | 202 | 1.07 | Lat. $15^0$8'55.47" N Long : $75^0$15'56.08" E |
| 15. | Bukoppa | Kundgol/ Dharwad | 0.800 | 34, 39, 38 | 197 | 1.10 | Lat. $15^0$8'12.48" N Long : $75^0$17'37.19" E |
| 16. | Kubihal | Kundgol/ Dharwad | 0.800 | 79 | 211 | 1.10 | Lat. $15^0$8'37.93" N Long : $75^0$16'29.38" E |
| 17. | Bukoppa | Kundgol/ Dharwad | 0.800 | 45 | 210 | 1.10 | Lat. $15^0$8'35.28" N Long : $75^0$16'7.60" E |
| 18. | Bukoppa | Kundgol/ Dharwad | 0.800 | 48 | 205 | 1.10 | Lat. $15^0$8'21.42" N Long : $75^0$15'50.99" E |
| 19. | Kubihal | Kundgol/ Dharwad | 0.800 | 76 | 199 | 1.10 | Lat. $15^0$8'38.21" N Long : $75^0$15'36. " E |

| Sl. No. | Village Name | Taluk/ District | MW | Land Survey number | WTG's No. | Extent of Land per WTG (Acres) | Latitude, Longitude and Ridge peaks |
|---|---|---|---|---|---|---|---|
| 20. | Kubihal | Kundgol/ Dharwad | 0.800 | 76 | 200 | 1.10 | Lat. $15^0$8'47.22" N<br>Long : $75^0$15'35.85" E |
| | | **Total** | **16.00** | | | | |

1. **ಮೆ॥ ರಿನೀವ್ ವಿಂಡ್ ಎನರ್ಜಿ (ಕರ್ನಾಟಕ) ಪ್ರೈವೇಟ್ ಲಿಮಿಟೆಡ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ : ಇಎನ್ 435 ಎನ್‌ಸಿಇ 2011, ದಿನಾಂಕ : 06–01–2012ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
2. **ಮೆ॥ ರಿನೀವ್ ವಿಂಡ್ ಎನರ್ಜಿ (ಕರ್ನಾಟಕ) ಪ್ರೈವೇಟ್ ಲಿಮಿಟೆಡ್** ರವರು ಉತ್ಪಾದಿಸುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟ ಮಾಡಲು ಮತ್ತು ಸ್ವಂತಕ್ಕೆ ಬಳಸಿಕೊಳ್ಳಲು ಅನುಮತಿಸಿದೆ.
3. ಸದರಿ ಯೋಜನೆಯನ್ನು ಆದೇಶ ಹೊರಡಿಸಿದ ದಿನಾಂಕದಿಂದ 10 ತಿಂಗಳೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು. ಈ ಕುರಿತಂತೆ ಕ್ರೆಡಲ್ ಅಭಿವೃದ್ಧಿದಾರರಿಂದ ಒಪ್ಪಿಗೆ ಪತ್ರ ಪಡೆಯತಕ್ಕದ್ದು (Commitment Letter)
4. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR. 979**
**SC-25**

**ಎ.ಎ. ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** ಮೆ॥ ಕೊಡಗು ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಬೀದಳ್ಳಿ ಕಿರು ಜಲ ವಿದ್ಯುತ್ ಯೋಜನೆಯ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 212 ಎನ್‌ಸಿಇ 2005, ದಿನಾಂಕ : 22–08–2005.
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 250 ಎನ್‌ಸಿಇ 2010, ದಿನಾಂಕ : 14–01–2011.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 250 ಎನ್‌ಸಿಇ 2010, ದಿನಾಂಕ : 28–02–2012.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕರ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/SH-236/Bidalli MHS/2012/87, ದಿನಾಂಕ : 08–01–2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಕೊಡಗು ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್, ಇವರಿಗೆ ಕೊಡಗು ಜಿಲ್ಲೆಯ ಸೋಮವಾರಪೇಟೆ ತಾಲ್ಲೂಕಿನ ಬೀದಳ್ಳಿ ಗ್ರಾಮದ ಬಳಿ ಕುಮಾರಧಾರ ನದಿಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಬೀದಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಮೆ॥ ಕೊಡಗು ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್, ಇವರಿಗೆ ಕೊಡಗು ಜಿಲ್ಲೆಯ ಸೋಮವಾರ ಪೇಟೆ ತಾಲ್ಲೂಕಿನ ಬೀದಳ್ಳಿ ಗ್ರಾಮದ ಬಳಿ ಕುಮಾರಧಾರ ನದಿಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಬೀದಳ್ಳಿ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ : 30–09–2011ರವರೆಗೆ ವಿಸ್ತರಿಸಲಾಗಿತ್ತು. ನಂತರ ಮತ್ತೆ ಸದರಿ ಯೋಜನೆಯ ಅನುಷ್ಠಾನಕ್ಕೆ ದಿನಾಂಕ : 01–10–2011 ರಿಂದ 18 ತಿಂಗಳ ಅವಧಿಗೆ ಕೆಲವೊಂದು ಷರತ್ತಿಗೊಳಪಟ್ಟು ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಕಾಲಾವಧಿ ವಿಸ್ತರಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರಗಳಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರು ಮೆ॥ ಕೊಡಗು ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್‌ರವರಿಗೆ ಹಂಚಿಕೆಯಾಗಿರುವ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶ ವಿಸ್ತರಣಾ ಶುಲ್ಕ ಪಾವತಿಸುವ ಮತ್ತು ನಿಗದಿತ ಅವಧಿಯೊಳಗೆ ಯೋಜನೆಯನ್ನು ಅನುಷ್ಠಾನಗೊಳಿಸದಿದ್ದಲ್ಲಿ, ಈಗಾಗಲೇ ಪಾವತಿಸಿರುವ ರೂ. 9.00 ಲಕ್ಷಗಳ Performance ಬ್ಯಾಂಕ್ ಗ್ಯಾರಂಟಿಯನ್ನು ನಗಧೀಕರಿಸಿಕೊಳ್ಳುವ ಷರತ್ತಿಗೊಳಪಟ್ಟು ಯೋಜನೆಗೆ ದಿನಾಂಕ : 01–04–2013 ರಿಂದ 30–11–2013ರ ವರೆಗೆ ಕಾಲಾವಕಾಶ ವಿಸ್ತರಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 23 ಎನ್‌ಸಿಇ 2013, ಬೆಂಗಳೂರು, ದಿನಾಂಕ : 12–02–2013**

ಮೆ॥ ಕೊಡಗು ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್, ಇವರಿಗೆ ಕೊಡಗು ಜಿಲ್ಲೆಯ ಸೋಮವಾರಪೇಟೆ ತಾಲ್ಲೂಕಿನ ಬೀದಳ್ಳಿ ಗ್ರಾಮದ ಬಳಿ ಕುಮಾರಧಾರ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಲಾದ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಬೀದಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಅಂತಿಮವಾಗಿ ದಿನಾಂಕ : 01–04–2013 ರಿಂದ ಮುಂದಿನ ಒಂದು ವರ್ಷದ ವರೆಗೆ ಕೆಳಕಂಡ ಷರತ್ತಿಗೊಳ್ಳಪಟ್ಟು ಕಾಲಾವಧಿ ವಿಸ್ತರಿಸಿ ಆದೇಶಿಸಿದೆ.

1. ಅಭಿವೃದ್ಧಿದಾರರು ನಿಗದಿತ ಕಾಲಾವಕಾಶ ವಿಸ್ತರಣಾ ಶುಲ್ಕವನ್ನು ಕ್ರೆಡಲ್‌ಗೆ ಪಾವತಿಸತಕ್ಕದ್ದು.
2. ದಿನಾಂಕ : 31–03–2014 ರೊಳಗೆ ಯೋಜನೆಯನ್ನು ಅನುಷ್ಠಾನಗೊಳಿಸದಿದ್ದಲ್ಲಿ ಈಗಾಗಲೇ ಪಾವತಿಸಿರುವ ರೂ. 9.00 ಲಕ್ಷಗಳ Performance ಬ್ಯಾಂಕ್ ಗ್ಯಾರಂಟಿಯನ್ನು ಕ್ರೆಡಲ್ ಸಂಸ್ಥೆಯು ನಗಧೀಕರಿಸಿಕೊಳ್ಳುವುದು.

3. ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತದೆ.

4. ಸದರಿ ಆದೇಶವನ್ನು ರದ್ದು ಪಡಿಸುವ/ಮಾರ್ಪಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಎ. ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

PR. 985
SC-25

## ಇಂಧನ ಸಚಿವಾಲಯ

**ವಿಷಯ :** M/s J.N. Investments & Trading Co, Pvt. Ltd. ಕಂಪನಿಯವರಿಗೆ ಮಂಜೂರಾಗಿರುವ 27.2 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು 77.6 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಡಿಇ 41 ಎನ್‌ಸಿಇ 2006, ದಿನಾಂಕ : 20–04–2006.
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 400 ಎನ್‌ಸಿಇ 2010(1), ದಿನಾಂಕ : 27–09–2010.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 148 ಎನ್‌ಸಿಇ 2011, ದಿನಾಂಕ : 23–03–2011.
4. ಸರ್ಕಾರಿ ಆದೇಶ ಸಂಖ್ಯೆ : ಇಎನ್ 148 ಎನ್‌ಸಿಇ 2011, ದಿನಾಂಕ : 04–07–2011.
5. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/J.N.I (27.2 MW to 77.6 MW)/ 2012/2819, ದಿನಾಂಕ : 02–11–2012.
6. ದಿನಾಂಕ : 03–11–2012ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ M/s J.N. Investments & Trading Co, Pvt. Ltd ಕಂಪನಿಗೆ ಧಾರವಾಡ ಮತ್ತು ಗದಗ ಜಿಲ್ಲೆಗಳ ವಿವಿಧ ಪ್ರದೇಶಗಳಲ್ಲಿ ಒಟ್ಟು 84.84 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು. ಮೇಲಿನ ಒಟ್ಟು ಸಾಮರ್ಥ್ಯದಲ್ಲಿ ಗದಗ್ ಜಿಲ್ಲೆಯ ಅಡವಿಸೋಮಾಪುರ, ಕಳಸಪುರ, ಮಲಸಮುದ್ರ ಗ್ರಾಮಗಳಲ್ಲಿ ಹಂಚಿಕೆಯಾಗಿದ್ದ ಭಾಗಶಃ ಸಾಮರ್ಥ್ಯವಾದ 6.93 ಮೆ.ವ್ಯಾ. ಸಾಮರ್ಥ್ಯವನ್ನು 8.00 ಮೆ.ವ್ಯಾ.ಗೆ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹೆಚ್ಚಿಸಿ ಆದೇಶಿಸಲಾಗಿತ್ತು. ಸದರಿ ಸಾಮರ್ಥ್ಯವನ್ನು ಮೇಲೆ ಕ್ರಮ ಸಂಖ್ಯೆ (3) ಹಾಗೂ (4)ರಲ್ಲಿ ಓದಲಾಗಿರುವ ಆದೇಶಗಳಲ್ಲಿ ಕ್ರಮವಾಗಿ 15.2 ಮೆ.ವ್ಯಾ. ಸಾಮರ್ಥ್ಯಕ್ಕೆ ಹಾಗೂ 27.2 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s J.N. Investments & Trading Co, Pvt. Ltd. ಕಂಪನಿಯವರಿಗೆ ಸರ್ಕಾರದ ವಿವಿಧ ಆದೇಶಗಳಲ್ಲಿ ಗದಗ್ ಜಿಲ್ಲೆಯ ಅಡವಿಸೋಮಾಪುರ, ಕಳಸಪುರ, ಮಲಸಮುದ್ರ ಗ್ರಾಮಗಳಲ್ಲಿ ಮಂಜೂರಾಗಿರುವ 27.2 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯು ಈಗಾಗಲೇ ಅನುಷ್ಠಾನಗೊಂಡಿದ್ದು, ಸದರಿ ಸಾಮರ್ಥ್ಯವನ್ನು 77.6 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ ಅಲ್ಲದೆ ಸಾಮರ್ಥ್ಯ ಹೆಚ್ಚಳಕ್ಕೆ ಸಂಬಂಧಿಸಿದಂತೆ ಅಭಿವೃದ್ಧಿದಾರರು ರೂ. 55.44 ಲಕ್ಷಗಳ ಶುಲ್ಕ ಪಾವತಿಸಿರುತ್ತಾರೆಂದು ತಿಳಿಸಿರುತ್ತಾರೆ ಹಾಗೂ ಸಾಮರ್ಥ್ಯ ಹೆಚ್ಚಳಗೊಳ್ಳಲಿರುವ 50.4 ಸಾಮರ್ಥ್ಯವನ್ನು ದಿನಾಂಕ : 31–03–2013ರೊಳಗಾಗಿ ಅನುಷ್ಠಾನಗೊಳಿಸುವುದಾಗಿ ಹಾಗೂ ಉತ್ಪಾದನೆ ಆಗುವ ವಿದ್ಯುತ್ತನ್ನು ಪಿಪಿಎ ಮೂಲಕ ಸಂಬಂಧಿಸಿದ ಎಸ್ಕಾಂಗೆ ಸರಬರಾಜು ಮಾಡಲಾಗುವುದೆಂದು ವರದಿ ಮಾಡಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯು ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಶಿಫಾರಸ್ಸು ಮಾಡಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 333 ಎನ್‌ಸಿಇ 2012, ಬೆಂಗಳೂರು, ದಿನಾಂಕ : 12–02–2013.**

M/s J.N. Investments & Trading Co, Pvt. Ltd. ಇವರಿಗೆ ಗದಗ್ ಜಿಲ್ಲೆಯ ಅಡವಿಸೋಮಾಪುರ, ಕಳಸಪುರ, ಮಲಸಮುದ್ರ ಗ್ರಾಮಗಳಲ್ಲಿ ಮಂಜೂರಾಗಿರುವ 27.2 ಮೆ.ವ್ಯಾ. ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 77.6 ಮೆ.ವ್ಯಾ. ಸಾಮರ್ಥ್ಯಕ್ಕೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು ಹೆಚ್ಚಿಸಿ ಆದೇಶಿಸಿದೆ.

| Near by Villages of the proposed area and District | Geographical Area Details of the Project | Sanctioned capacity in MW | Enhancement Proposed in MW | No. of WTGs & rating in KW | Total capacity including proposed enhancement in MW |
|---|---|---|---|---|---|
| Adavisomapura, Kalasapura, Malasamudra villages in Gadag District | The proposed area is located on the North-East of Betgeri and South of Gadag. This area is spread around Nagasamudra and Adavisomapura and has several peaks. It is held by the following Geographical co-oridinates :-<br>Latitude : $15^{0}21'7"$-$15^{0}24'27"$ N<br>Longitude : 75 036'30"-$75^{0}41'2"$ E<br>Ridge peaks : 673, 702, 747, 717, 709, 678.3m AMSL | 27.2 MW | 50.4 MW | 63 Nos.x 800 Kw | 77.6 |

1. M/s J.N. Investments & Trading Co, Pvt. Ltd. ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ : ಇಎನ್ 435 ಎನ್‌ಸಿಇ 2011, ದಿನಾಂಕ : 06–01–2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
2. M/s J.N. Investments & Trading Co, Pvt. Ltd. ರವರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
3. ಸದರಿ ಯೋಜನೆಯನ್ನು ದಿನಾಂಕ : 31–03–2013 ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು.
4. ಈ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**PR. 987**
**SC-25**

## ಇಂಧನ ಸಚಿವಾಲಯ

**ವಿಷಯ :** ಮೆ॥ ದೇವರ್ ಪವರ್ ಪ್ರೈವೇಟ್ ಲಿಮಿಟೆಡ್ ಇವರ 3.8 ಮೆಗಾ ವ್ಯಾಟ್ ಸಾಮರ್ಥ್ಯದ ಬಜೆ ಕಿರು ಜಲ ವಿದ್ಯುತ್ ಯೋಜನೆಯ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಇಂಇ 87 ಎನ್‌ಸಿಇ 2003, ದಿನಾಂಕ : 02–08–2003.
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 87 ಎನ್‌ಸಿಇ 2003, ದಿನಾಂಕ : 10–02–2004.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 18 ಎನ್‌ಸಿಇ 2007, ದಿನಾಂಕ : 07–02–2007.
4. ಸರ್ಕಾರಿ ಆದೇಶ ಸಂಖ್ಯೆ : ಇಎನ್ 622 ಎನ್‌ಸಿಇ 2009, ದಿನಾಂಕ : 23–02–2010.
5. ಸರ್ಕಾರಿ ಆದೇಶ ಸಂಖ್ಯೆ : ಇಎನ್ 300 ಎನ್‌ಸಿಇ 2011, ದಿನಾಂಕ : 29–07–2011.
6. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಎಸ್‌ಹೆಚ್–112/ಬಜೆ ಎಂಹೆಚ್‌ಎಸ್/ 2012/2875, ದಿನಾಂಕ : 05/06–11–2012.
7. ಸರ್ಕಾರದ ಪತ್ರ ಸಂಖ್ಯೆ : ಇಎನ್ 341 ಎನ್‌ಸಿಇ 2012, ದಿನಾಂಕ : 27–11–2012.
8. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಎಸ್‌ಹೆಚ್–112/ಬಜೆ ಎಂಹೆಚ್‌ಎಸ್/ 2012/3181, ದಿನಾಂಕ : 04–12–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ದೇವರ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಉಡುಪಿ ಜಿಲ್ಲೆಯ ಉಡುಪಿ ತಾಲ್ಲೂಕಿನ ಹಿರಿಯಡ್ಕ ಗ್ರಾಮದ ಬಳಿ ಸ್ವರ್ಣ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಸದರಿ ಯೋಜನೆಯ ಸಾಮರ್ಥ್ಯವನ್ನು 2.00 ಮೆಗಾ ವ್ಯಾಟ್‌ನಿಂದ 3.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಸದರಿ ಯೋಜನೆಯ ಕಾಲಾವಕಾಶವನ್ನು ದಿನಾಂಕ : 11–02–2007 ರಿಂದ ಮುಂದಿನ 3 ವರ್ಷಗಳ ಅವಧಿಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ಸದರಿ ಯೋಜನೆಯ ಸಾಮರ್ಥ್ಯವನ್ನು 3 ಮೆ.ವ್ಯಾ. ನಿಂದ 3.8 ಮೆ.ವ್ಯಾ.ಗೆ ಹೆಚ್ಚಿಸಿ ಯೋಜನೆಯ ಕಾಲಾವಕಾಶವನ್ನು ದಿನಾಂಕ : 07–02–2010 ರಿಂದ ಮುಂದಿನ ಒಂದು ವರ್ಷದ ಅವಧಿಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಆದೇಶದಲ್ಲಿ ಸದರಿ ಯೋಜನೆಯ ಕಾಲಾವಕಾಶವನ್ನು ದಿನಾಂಕ : 07–02–2011 ರಿಂದ ಮುಂದಿನ ಒಂದು ವರ್ಷದ ಅವಧಿಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಇವರು ಮೆ॥ ದೇವರ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಮೇಲ್ಕಂಡ ಯೋಜನೆಯನ್ನು ಅನುಷ್ಠಾನಗೊಳಿಸಲು ನೀಡಿದ್ದ ಅವಧಿಯು ದಿನಾಂಕ : 06–02–2012ಕ್ಕೆ ಮುಗಿದಿದ್ದು, ಯೋಜನೆಯು ಅನುಷ್ಠಾನದ ಹಂತದಲ್ಲಿರುವುದರಿಂದ ಅಭಿವೃದ್ಧಿದಾರರ ಕೋರಿಕೆಯ ಹಿನ್ನೆಲೆಯಲ್ಲಿ ಸದರಿ ಯೋಜನೆಯ ಅನುಷ್ಠಾನಕ್ಕಾಗಿ ಮೆಗಾ ವ್ಯಾಟ್ ಒಂದಕ್ಕೆ ರೂ. 3.00 ಲಕ್ಷಗಳು Performance guarantee ನೀಡತಕ್ಕದ್ದೆಂಬ ಮತ್ತು ಕಾಲಾವಧಿ ವಿಸ್ತರಣಾ ಶುಲ್ಕವನ್ನು ಪಾವತಿಸತಕ್ಕದ್ದೆಂಬ ಷರತ್ತಿಗೊಳಪಟ್ಟು ಕಾಲಾವಕಾಶವನ್ನು ದಿನಾಂಕ : 07–02–2012 ರಿಂದ 06–02–2014ರವರೆಗೆ ವಿಸ್ತರಿಸಬೇಕೆಂದು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ಸರ್ಕಾರಿ ಪತ್ರದಲ್ಲಿ ಸದರಿ ಯೋಜನೆಯ ಅನುಷ್ಠಾನಕ್ಕೆ ಅಗತ್ಯವಿರುವ ಇಲಾಖೆಗಳ ಅನುಮೋದನೆ ಪಡೆದಿರುವ ಕುರಿತ ದಾಖಲೆಗಳೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಕ್ರೆಡಲ್‌ನ ವ್ಯವಸ್ಥಾಪಕ ನಿರ್ದೇಶಕರನ್ನು ಕೋರಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (8) ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಮೆ॥ ದೇವರ್ ಪವರ್ ಪ್ರೈವೇಟ್ ಲಿಮಿಟೆಡ್ ರವರು ಅಗತ್ಯವಿರುವ ಎಲ್ಲಾ ಇಲಾಖೆಗಳಿಂದ ಅನುಮತಿ/ನಿರಾಪೇಕ್ಷಣಾ ಪತ್ರಗಳನ್ನು ಪಡೆದಿದ್ದು, ಈ ಯೋಜನೆಯ ಕಾಲಾವಕಾಶವನ್ನು ವಿಸ್ತರಿಸಬಹುದಾಗಿದೆ ಎಂದು ಅಭಿಪ್ರಾಯ ನೀಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 341 ಎನ್‌ಸಿಇ 2012, ಬೆಂಗಳೂರು, ದಿನಾಂಕ : 20–02–2013.**

ಮೆ॥ ದೇವರ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಉಡುಪಿ ಜಿಲ್ಲೆಯ ಉಡುಪಿ ತಾಲ್ಲೂಕಿನ ಹಿರಿಯಡ್ಕ ಗ್ರಾಮದ ಬಳಿ ಸ್ವರ್ಣ ನದಿಗೆ ಅಡ್ಡಲಾಗಿ ಹಂಚಿಕೆಯಾಗಿ ಹೆಚ್ಚಿಸಿದ, ಪ್ರಸ್ತುತ 3.8 ಮೆಗಾ ವ್ಯಾಟ್ ಸಾಮರ್ಥ್ಯದ ಬಜೆ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶವನ್ನು ಮುಂದಿನ ಎರಡು ವರ್ಷದ ಅವಧಿಗೆ (ದಿನಾಂಕ : 07–02–2012 ರಿಂದ 06–02–2014ರ ವರೆಗೆ) ಈ ಕೆಳಕಂಡ ಷರತ್ತಿಗೊಳಪಟ್ಟು ವಿಸ್ತರಿಸಲಾಗಿದೆ.

1. ಮೆಗಾ ವ್ಯಾಟ್ ಒಂದಕ್ಕೆ ರೂ. 3.00 ಲಕ್ಷಗಳು Performance guarantee ನ್ನು ನೀಡತಕ್ಕದ್ದು ಮತ್ತು ಕಾಲಾವಧಿ ವಿಸ್ತರಣಾ ಶುಲ್ಕವನ್ನು ನಿಯಮಾನುಸಾರ ಪಾವತಿಸತಕ್ಕದ್ದು.
2. ಈ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಉಪ ಕಾರ್ಯದರ್ಶಿ,
ಇಂಧನ ಇಲಾಖೆ.

PR. 989
SC-25

## ಇಂಧನ ಸಚಿವಾಲಯ

**ವಿಷಯ :** ಮೆ॥ ಸ್ವರ್ಣ ಗ್ರೀನ್ ಪವರ್ ಕಂಪನಿ ಇವರಿಗೆ ಮಂಜೂರಾಗಿರುವ 7 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶ ವಿಸ್ತರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಇಂಇ 216 ಎನ್‌ಸಿಇ 2001, ದಿನಾಂಕ : 19–07–2002.
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 80 ಎನ್‌ಸಿಇ 2008, ದಿನಾಂಕ : 22–02–2008.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 492 ಎನ್‌ಸಿಇ 2008, ದಿನಾಂಕ : 08–05–2009.
4. ಸರ್ಕಾರಿ ಆದೇಶ ಸಂಖ್ಯೆ : ಇಎನ್ 438 ಎನ್‌ಸಿಇ 2009, ದಿನಾಂಕ : 28–02–2011.
5. ಸರ್ಕಾರಿ ಆದೇಶ ಸಂಖ್ಯೆ : ಇಎನ್ 438 ಎನ್‌ಸಿಇ 2009, ದಿನಾಂಕ : 10–11–2011.
6. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕೆಆರ್‌ಇಡಿ/08/ಎಸ್‌ಎಸ್‌ಜಿಪಿ–7 ಎಂಡಬ್ಲ್ಯೂ/2012/20, ದಿನಾಂಕ : 01–01–2013 ಮತ್ತು ಪತ್ರ ಸಂಖ್ಯೆ : ಕೆಆರ್‌ಇಡಿ/08/ಎಸ್‌ಎಸ್‌ಜಿಪಿ–7 ಎಂಡಬ್ಲ್ಯೂ/2013/888, ದಿನಾಂಕ : 19–03–2013/16–04–2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಎಸ್.ಆರ್.ಆರ್. ಪವರ್ ಜೆನ್ ಕಂಪನಿಗೆ ಇವರಿಗೆ ಬೆಳಗಾವಿ ಜಿಲ್ಲೆಯ ರಾಯಭಾಗ ತಾಲ್ಲೂಕಿನ ಮಾವಿನಹುಂಡಿಯಲ್ಲಿ 7.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮಂಜೂರು ಮಾಡಲಾಗಿತ್ತು. ಸದರಿ ಯೋಜನೆಯನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಮೆ॥ ಎಸ್.ಆರ್.ಆರ್. ಪವರ್ ಜೆನ್ ಕಂಪನಿಯಿಂದ ಮೆ॥ ಸ್ವರ್ಣ ಗ್ರೀನ್ ಪವರ್ ಕಂಪನಿಗೆ ವರ್ಗಾಯಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಮೆ॥ ಸ್ವರ್ಣ ಗ್ರೀನ್ ಪವರ್ ಕಂಪನಿಯವರು ಯೋಜನೆ ಅನುಷ್ಠಾನದ ನಿಟ್ಟಿನಲ್ಲಿ ಸಮಾಧಾನಕರ ಪ್ರಗತಿಯನ್ನು ಸಾಧಿಸದಿರುವುದರಿಂದ ಯೋಜನೆಯನ್ನು ರದ್ದುಪಡಿಸಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ಸದರಿ ರದ್ದತಿ ಆದೇಶವನ್ನು ಹಿಂಪಡೆದು ಕಾಲಾವಕಾಶವನ್ನು ದಿನಾಂಕ: 30–04–2011 ರವರೆಗೆ ವಿಸ್ತರಿಸಿ ಆದೇಶಿಸಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಆದೇಶದಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲು ದಿನಾಂಕ : 01–05–2011 ರಿಂದ 18 ತಿಂಗಳುಗಳವರೆಗೆ ಕಾಲಾವಧಿಯನ್ನು ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಪತ್ರಗಳಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಇವರು ಮೆ॥ ಸ್ವರ್ಣ ಗ್ರೀನ್ ಪವರ್ ಕಂಪನಿ ಇವರಿಗೆ ಯೋಜನೆಯನ್ನು ಅನುಷ್ಠಾನಗೊಳಿಸಲು ನೀಡಿದ್ದ ಕಾಲಾವಧಿಯು ದಿನಾಂಕ : 31–10–2012ಕ್ಕೆ ಮುಕ್ತಾಯವಾಗಿದ್ದು, ಸದರಿ ಯೋಜನಾ ಸ್ಥಳದ ಗ್ರಾಮಸ್ಥರು ನ್ಯಾಯಾಲಯದಲ್ಲಿ ದಾವೆ ಹೂಡಿದ್ದರ ಪರಿಣಾಮವಾಗಿ ಯೋಜನೆಯನ್ನು ಅನುಷ್ಠಾನಗೊಳಿಸಲು ಸಾಧ್ಯವಾಗಿರುವುದಿಲ್ಲವೆಂದು, ಪ್ರಸ್ತುತ ನ್ಯಾಯಾಲಯದಲ್ಲಿಯ ದಾವೆಯು ಇತ್ಯರ್ಥಗೊಂಡಿದ್ದು, ಯೋಜನಾ ಅನುಷ್ಠಾನದ ನಿಟ್ಟಿನಲ್ಲಿ ಅಭಿವೃದ್ಧಿದಾರರು ಕಾರ್ಯಪ್ರವೃತ್ತರಾಗಿರುವುದರಿಂದ ನಿಗದಿತ ಕಾಲಾವಧಿ ಶುಲ್ಕ ಪಾವತಿಸುವ ಷರತ್ತಿಗೊಳಪಟ್ಟು ದಿನಾಂಕ : 01–11–2012 ರಿಂದ 02 ವರ್ಷಗಳ ಅವಧಿಗೆ ಕಾಲಾವಧಿ ವಿಸ್ತರಿಸಬಹುದೆಂಬ ಶಿಫಾರಸ್ಸಿನೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 15 ಎನ್‌ಸಿಇ 2013, ಬೆಂಗಳೂರು, ದಿನಾಂಕ : 10–06–2013.**

ಮೆ॥ ಸ್ವರ್ಣ ಗ್ರೀನ್ ಪವರ್ ಕಂಪನಿಯವರಿಗೆ ಬೆಳಗಾವಿ ಜಿಲ್ಲೆಯ ರಾಯಭಾಗ ತಾಲ್ಲೂಕಿನ ಮಾವಿನಹುಂಡದಲ್ಲಿ ಮಂಜೂರಾಗಿರುವ 7.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ನಿಯಮಾನುಸಾರ ಕಾಲಾವಧಿ ವಿಸ್ತರಣಾ ಶುಲ್ಕವನ್ನು ಪಾವತಿಸತಕ್ಕದೆಂಬ ಷರತ್ತಿಗೊಳಪಟ್ಟು ಕಾಲಾವಧಿಯನ್ನು ದಿನಾಂಕ : 01–11–2012 ರಿಂದ ಎರಡು ವರ್ಷಗಳ ಅವಧಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಈ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

PR. 1028
SC-25

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:–** ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಪರಿಣಾಮಕಾರಿ ಅನುಷ್ಠಾನಕ್ಕಾಗಿ **"ಗ್ರಾಮೀಣಾಭಿವೃದ್ಧಿ ಆಯುಕ್ತಾಲಯ"** (Rural Development Commissionerate) ಅನ್ನು ರಚಿಸುವ ಕುರಿತು.

**ಓದಲಾಗಿದೆ:**

1) ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 41 ಉಖಾಯೋ 2006 ದಿನಾಂಕ: 13–12–2007.
2) ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 104 ಉಖಾಯೋ 2007 ದಿನಾಂಕ: 02–04–2008.
3) ಕೇಂದ್ರ ಸರ್ಕಾರದ ಗೆಜೆಟ್ ಪ್ರಕಟಣೆ ದಿನಾಂಕ: 31.12.2009.
4) ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 258 ಉಖಾಯೋ 2011 ದಿನಾಂಕ: 09–01–2013
5) ಭಾರತ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯದ 2013 ರ ಕಾರ್ಯಚರಣೆ ಮಾರ್ಗಸೂಚಿಗಳು (Operational Guidelines 2013).
6) ಸರ್ಕಾರದ ಮುಖ್ಯ ಕಾರ್ಯದರ್ಶಿರವರ ಅಧ್ಯಕ್ಷತೆಯಲ್ಲಿ ದಿನಾಂಕ: 2–7–2013 ರಂದು ನಡೆದ ಸಭೆಯ ನಡವಳಿಗಳು.

**ಪ್ರಸ್ತಾವನೆ:–**

ಕರ್ನಾಟಕ ರಾಜ್ಯದಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ (ನರೇಗಾ) ಯನ್ನು 2006–07 ನೇ ಸಾಲಿನಿಂದ ಹಂತ ಹಂತವಾಗಿ ಜಾರಿಗೊಳಿಸಲಾಗುತ್ತಿದೆ. ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಅವಶ್ಯವಿರುವ ಕೆಲವು ಹುದ್ದೆಗಳನ್ನು ಅಂದರೆ ಮುಖ್ಯಸ್ಥರು (ಹಣಕಾಸು ಮತ್ತು ಲೆಕ್ಕಪತ್ರ) ಮತ್ತು ಲೆಕ್ಕಾಧಿಕಾರಿಯ ತಲಾ ಒಂದು ಹುದ್ದೆ ಹಾಗೂ ಲೆಕ್ಕ ಪರಿಶೋಧನಾಧಿಕಾರಿ ಅಥವಾ ಲೆಕ್ಕಾಧೀಕ್ಷಕರ 2 ಹುದ್ದೆಗಳನ್ನು ಮೇಲೆ (1) ರಲ್ಲಿ ಓದಲಾದ ದಿನಾಂಕ: 13–12–2007ರ ಆದೇಶದಲ್ಲಿ ಸೃಜಿಸಲಾಗಿದೆ. ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ನಿರ್ದೇಶಕರು, ನರೇಗಾ ಹುದ್ದೆಯೊಂದಿಗೆ ಅವಶ್ಯವಿರುವ ಇನ್ನೂ ಕೆಲವು ಪೂರಕ ಸಿಬ್ಬಂದಿ ಹುದ್ದೆಗಳನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ: 2–4–2008 ರ ಆದೇಶದಲ್ಲಿ ಸೃಜಿಸುವ ಮೂಲಕ ಪ್ರತ್ಯೇಕ ನರೇಗಾ ನಿರ್ದೇಶನಾಲಯವನ್ನು ಸ್ಥಾಪಿಸಲಾಗಿದೆ. ಮುಂದುವರೆದು, ಮೇಲೆ (3)ರಲ್ಲಿ ಓದಲಾದ ದಿನಾಂಕ 31.12.2009ರ ಪ್ರಕಟಣೆಯಲ್ಲಿ ಕೇಂದ್ರ ಸರ್ಕಾರವು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮ, 2005ಕ್ಕೆ ತಿದ್ದುಪಡಿಯನ್ನು ತಂದು ನರೇಗಾ ಯೋಜನೆಯನ್ನು "ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ" ಎಂಬುದಾಗಿ ಹೆಸರಿಸಿದೆ.

ಮುಂದುವರೆದು, ನರೇಗಾ ಯೋಜನೆಯಡಿ ಸಾಮಾಜಿಕ ಪರಿಶೋಧನಾ ಕಾರ್ಯನಿರ್ವಹಣೆಗಾಗಿ ಒಂದು ನಿರ್ದೇಶಕರ ಹುದ್ದೆಯನ್ನು ಸೃಜಿಸಲು ಅವಕಾಶ ಕಲ್ಪಿಸಲಾಗಿದೆ. ಅದರಂತೆ ಮೇಲೆ (4)ರಲ್ಲಿ ಓದಲಾದ ದಿನಾಂಕ: 9–1–2013 ರ ಸರ್ಕಾರಿ ಆದೇಶದಲ್ಲಿ ನಿರ್ದೇಶಕರು, ಸಾಮಾಜಿಕ ಪರಿಶೋಧನೆ ಹುದ್ದೆಯನ್ನು ಸೃಜಿಸಿ ಭರ್ತಿ ಮಾಡಲಾಗಿದೆ.

ಭಾರತ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಮೇಲೆ (5) ರಲ್ಲಿ ಓದಲಾದ ಪರಿಷ್ಕೃತ ಹಾಗೂ ಕಾಲೋಚಿತ **ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮದ ಕಾರ್ಯಚರಣೆ ಮಾರ್ಗಸೂಚಿಗಳು, 2013** (Operational Guidelines, 2013) ಅನ್ನು ಹೊರಡಿಸಿದ್ದು, ಅದರ ಪ್ರಕಾರ, ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ರಾಜ್ಯ, ಜಿಲ್ಲೆ, ಉಪ ವಿಭಾಗ, ಗ್ರಾಮಪಂಚಾಯತಿ ಹಾಗೂ ಕಾಮಗಾರಿ ಸ್ಥಳದ ಮಟ್ಟದಲ್ಲಿ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಬೇಕಾಗಿದೆ. ಈ ಯೋಜನೆಯ ಹಾಗು ಸರ್ಕಾರ ವಹಿಸುವ ಇತರೆ ಗ್ರಾಮೀಣಾಭಿವೃದ್ಧಿ ಯೋಜನೆಗಳ ಯಶಸ್ವಿ ಅನುಷ್ಠಾನ ಮತ್ತು ಸಮರ್ಥ ಮೇಲ್ವಿಚಾರಣೆಗಾಗಿ ರಾಜ್ಯದಲ್ಲಿ **"ಗ್ರಾಮೀಣಾಭಿವೃದ್ಧಿ ಆಯುಕ್ತಾಲಯ"** (Rural Development Commissionerate) ರಚಿಸುವ ಅಗತ್ಯತೆ ಇದೆ. ಮುಂದುವರೆದು ಮೇಲೆ (6) ರಲ್ಲಿ ಓದಲಾದ ದಿನಾಂಕ 2–7–2013 ರಂದು ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಈ ಬಗ್ಗೆ ಚರ್ಚಿಸಿ, ಪ್ರಸ್ತುತ ಅಸ್ತಿತ್ವದಲ್ಲಿರುವ ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ನಿರ್ದೇಶಕರ ಹುದ್ದೆಯನ್ನು ಆಯುಕ್ತರ ಹುದ್ದೆಗೆ ಉನ್ನತೀಕರಿಸುವುದು ಸೇರಿದಂತೆ ಸದರಿ ನಿರ್ದೇಶನಾಲಯದ ಕೆಲವೊಂದು ಹುದ್ದೆಗಳನ್ನು ಉನ್ನತೀಕರಿಸಲು ಹಾಗೂ ಹೊಸದಾಗಿ ಕೆಲವು ಹುದ್ದೆಗಳನ್ನು ಸೃಜಿಸಿ ಗ್ರಾಮೀಣಾಭಿವೃದ್ಧಿ ಆಯುಕ್ತಾಲಯವನ್ನು ರಚಿಸಲು ಆರ್ಥಿಕ ಇಲಾಖೆಯೊಡನೆ ಸಮಾಲೋಚಿಸಿ ಅವಶ್ಯಕ ಕ್ರಮಗಳನ್ನು ತೆಗೆದುಕೊಳ್ಳಬೇಕೆಂದು ತೀರ್ಮಾನಿಸಲಾಗಿದೆ. ಅಲ್ಲದೆ, ಮಾನ್ಯ ಮುಖ್ಯ ಮಂತ್ರಿಯವರು 2013–14 ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ 365 ರಲ್ಲಿ ರಾಜ್ಯದಲ್ಲಿ ಮಹಾತ್ಮಾ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಗ್ರಾಮೀಣಾಭಿವೃದ್ಧಿ ಆಯುಕ್ತಾಲಯವನ್ನು ರಚಿಸಲಾಗುವುದೆಂದು ಘೋಷಿಸಿದ್ದಾರೆ.

ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಗ್ರಾಮೀಣಾಭಿವೃದ್ಧಿ ಆಯುಕ್ತಾಲಯವನ್ನು ರಚಿಸುವ ಕುರಿತ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆ ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಜೊತೆ ಸಮಾಲೋಚಿಸಿ ಪರಿಶೀಲಿಸಲಾಗಿದೆ. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಈ ಯೋಜನೆಯಡಿ ಪ್ರಸ್ತಾಪಿಸಿರುವ ಹುದ್ದೆಗಳನ್ನು ಸೃಜಿಸಿ / ಉನ್ನತೀಕರಿಸಿ / ಪುನರ್ ಪದನಾಮಗೊಳಿಸಿದ ನಂತರ ಅಖಿಲ ಭಾರತ ಸೇವಾ ಅಧಿಕಾರಿಗಳು ಅಥವಾ ಕರ್ನಾಟಕ ಆಡಳಿತ ಸೇವಾ ಅಧಿಕಾರಿಗಳಿಂದ ಭರ್ತಿ ಮಾಡಬೇಕಿದ್ದಲ್ಲಿ ಆ ಕುರಿತು ಪ್ರಸ್ತಾವನೆಯನ್ನು ಸದರಿ ಇಲಾಖೆಗೆ ಕಳುಹಿಸಬೇಕೆಂದು ದಿನಾಂಕ: 10–7–2013 ರಂದು ಅಭಿಪ್ರಾಯ ವ್ಯಕ್ತಪಡಿಸಿದೆ. ಮುಂದುವರೆದು, ಪ್ರಸ್ತಾವಿತ ಆಯುಕ್ತಾಲಯ ರಚನೆ ಕುರಿತಂತೆ ಆರ್ಥಿಕ ಇಲಾಖೆಯೊಡನೆ ಸಮಾಲೋಚಿಸಲಾಗಿ, ದಿನಾಂಕ: 22–7–2013 ರ ಅನಧಿಕೃತ ಟಿಪ್ಪಣಿಯಲ್ಲಿ ಪ್ರಸ್ತಾವಿತ ಗ್ರಾಮೀಣಾಭಿವೃದ್ಧಿ ಆಯುಕ್ತಾಲಯ ರಚನೆಗೆ ಅವಶ್ಯವಿರುವ ಕೆಲವು ಹುದ್ದೆಗಳನ್ನು ಸೃಜಿಸಲು, ಅಸ್ತಿತ್ವದಲ್ಲಿರುವ ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಸೃಜಿಸಲಾದ ಕೆಲವು ಹುದ್ದೆಗಳನ್ನು ಮರುಪದನಾಮಿಕರಿಸಿ / ಉನ್ನತೀಕರಿಸಿ ಪ್ರಸ್ತಾವಿತ ಗ್ರಾಮೀಣಾಭಿವೃದ್ಧಿ ಆಯುಕ್ತಾಲಯದ ವ್ಯಾಪ್ತಿಗೊಳಪಡಿಸಲು ಸಹಮತಿ ನೀಡಿರುತ್ತದೆ.

ಆದುದರಿಂದ, ಈ ಆದೇಶ.

